
ರಸಭರಿತ... ಮನಮೆಚ್ಚಿಕೆ... ಬಲು ಇಷ್ಟ.


ಕೇವಲ
25
ಪೈಸೆ!
PARLE
POPPINS
FRUIT SWEETS
25 Paise





# ಚಂದಮಾಮ

ಸಂಸ್ಥಾಪಕರು : ನಾಗಿರೆಡ್ಡಿ

ಸಂಚಾಲಕರು : ' ಚಕ್ರಪಾಣಿ '

ಈ ಸಂಚಿಕೆಯ ಕಥೆಗಳಲ್ಲಿ "ಸೌಂದರ್ಯದಾನ" ಎಂಬ ಬೇತಾಳ ಕಥೆಯಲ್ಲಿ ನಿಜವಾದ ಪ್ರೇಮಕ್ಕೆ ಆಧಾರವಾದುದು ತ್ಯಾಗವೇ ಎಂಬುದನ್ನು ಮನೋಹರವೆನಿಸುವಂತೆ ನೋಡಬಹುದು. ಈ ಕಥೆಯಲ್ಲಿ ಕಾರ್ಯ ಸಾಧನೆಗೆ ಹೊರಟವರು ಇಬ್ಬಗೆಯವರು, ಒಬ್ಬನು ವಾಸ್ತವ ದೃಷ್ಟಿಯವನು, ಇನ್ನೊಬ್ಬನು ಊಹಾ ಸಂಚಾರಿ, ವಿಜಯವು ಎರಡನೆಯ ಬಗೆಯವನಿಗೇ ದಕ್ಕುತ್ತದೆ. "ನ್ಯಾಯದೇವತೆ" ಕಥೆಯಲ್ಲಿ ಲೋಭವೇ ಲೋಭಿಯನ್ನು ಹಿಡಿದು ಕೊಡುತ್ತದೆ. "ಅಸಂತುಷ್ಟಿ", ಅತೃಪ್ತನ ಗುಣವನ್ನು ಬಿಂಬಿಸುವ ಸಾಂಕೇತಿಕ ಕಥೆ.

ಸಂಪುಟ: ೪೮] ಏಪ್ರಿಲ್ '೭೨ [ಸಂಚಿಕೆ ೪









# ಅಮರವಾಣಿ

ಅತಿಥಿರ್ಬಾಲಕಶ್ಚೈವ ಸ್ತ್ರೀ ಜನೋನೃಪತಿಸ್ತಥಾ
ಏ ತೇ ವಿತ್ತಂ ನ ಜಾನಂತಿ ಜಾಮಾತಾ ಚೈವಪಂಚಮಃ ೧.

ಅತಿಥಿಯೂ, ಹುಡುಗನೂ, ಹೆಂಗುಸೂ, ರಾಜನೂ, ಅಳಿಯನೂ, ಐವರೂ ಹಣವನ್ನು ಕುರಿತು ತಿಳಿದುಕೊಳ್ಳಲಾರರು.

ರಾಜಾ ರಾಷ್ಟ್ರಕೃತಂ ಪಾಪಂ
ರಾಜ ಪಾಪಂ ಪುರೋಹಿತಃ
ಭರ್ತಾ ಚ ಸ್ತ್ರೀಕೃತಂ ಪಾಪಂ
ಶಿಷ್ಯಪಾಪಂ ಗುರುರ್ಭವೇತ್ ೨.

ರಾಷ್ಟ್ರದಲ್ಲಿ ನಡೆಯುವ ಪಾಪವು ರಾಜನದು; ರಾಜನು ಮಾಡುವ ಪಾಪವು ಪುರೋಹಿತನದು; ಹೆಂಡತಿ ಮಾಡುವ ಪಾಪವು ಗಂಡನದು; ಶಿಷ್ಯನು ಮಾಡುವ ಪಾಪವು ಗುರುವಿನದು.

ವೃಶ್ಚಿಕಸ್ಯ ವಿಷಂ ಪುಚ್ಛಂ
ಮಕ್ಷಿಸ್ಯ ವಿಷಂ ಶಿರಃ
ತಕ್ಷಕಸ್ಯ ವಿಷಂ ದಂಷ್ಟ್ರಾ
ಸರ್ವಾಂಗಂ ದುರ್ಜನೇ ವಿಷಂ ೩.

ಚೇಳಿಗೆ ಬಾಲದಲ್ಲಿಯೂ, ನೊಣಕ್ಕೆ ತಲೆಯಲ್ಲಿಯೂ, ಹಾವಿಗೆ ಹಲ್ಲಿನಲ್ಲಿಯೂ ವಿಷವಿರುತ್ತದೆ. ದುರ್ಜನರಿಗೆ ಶರೀರವೆಲ್ಲವೂ ವಿಷವೇ.

—ಎಚ್ಚರಿಕೆ—



# ಕುಂಬಳಕಾಯಿಯ ಕಳ್ಳ

ಒಂದು ಊರಿನಲ್ಲಿ ಒಬ್ಬ ಕುಂಬಳಕಾಯಿ ವ್ಯಾಪಾರಿ ಇದ್ದ. ಅವನು ಸ್ವತಃ ಕಷ್ಟಪಟ್ಟು ಕುಂಬಳಕಾಯಿ ಗಳನ್ನು ಎಲ್ಲರ ಹಾಗೆ ದಳ್ಳಾಳಿಗಳ ಮೂಲಕ ಮಾರು ತಿರಲಿಲ್ಲ: ಕುಂಬಳ ಕಾಯಿಗಳನ್ನು ಗಾಡಿಯಲ್ಲಿ ಹಾಕಿ ಕೊಂಡು ಒಳ್ಳೆಯ ಗಿರಾಕಿಗಳು ಬರುವ ದೂರದ ಊರುಗಳಿಗೆ ಹೋಗಿ ಮಾರಿ ಹಣ ಮಾಡಿಕೊಳ್ಳುತ್ತಿ ದ್ದ. ನಷ್ಟದಲ್ಲಿ ಹಿಂದಿರುಗಲಾರ.

ಒಂದುದಿನ ಅವನು ಹೀಗೆಯೇ ತನ್ನ ಕುಂಬಳ ಕಾಯಿ ಗಾಡಿಯೊಂದಿಗೆ ಕನಕಪುರ ಪ್ರಾಂತದಲ್ಲಿರುವ ಒಂದು ಗ್ರಾಮವನ್ನು ತಲಪಿದನು.

ಅಷ್ಟುಹೊತ್ತಿಗೆ ಕತ್ತಲೆ ಬೀಳತೊಡಗಿದುದರಿಂದ, ಆ ರಾತ್ರಿ ಅಲ್ಲಿಯೇ ಎಲ್ಲಿಯಾದರೂ ವಿಶ್ರಾಂತಿ ಪಡೆದು ಬೆಳಗಾದ ಮೇಲೆ ಮುಂದಿನ ಊರಿಗೆ ಹೋಗಬೇಕೆಂದುಕೊಂಡನು.

ಹೀಗೆ ಯೋಚಿಸಿ, ಅವನು ಗ್ರಾಮದೊಳಗೆ ಗಾಡಿ ಯನ್ನು ಹೊಡೆದುಕೊಂಡು ಹೋಗುತ್ತಿದ್ದಾಗ, ಒಂದು ಮನೆಯ ಮುಂದೆ ನಿಂತಿದ್ದ ಒಬ್ಬ ಮನುಷ್ಯ ಅವನನ್ನು ನಿಲ್ಲಿಸಿ, "ಯಾವ ಊರು ? ಏನು ಕೆಲಸ? ಹೆಸರೇನು ?..." ಎಂದು ಕೆಲವು ಪ್ರಶ್ನೆಗಳನ್ನು ಮಾಡಿದನು. ಕುಂಬಳಕಾಯಿಯವನು ತನ್ನ ವಿಷಯ ವನ್ನೆಲ್ಲಾ ಹೇಳಿ, ಆ ರಾತ್ರಿ ತಂಗಿರಲು ತನಗೊಂದು ಜಾಗ ಬೇಕೆಂದು ಹೇಳಿದನು.

"ಅದಕ್ಕೇನು ಕಷ್ಟ? ಈ ರಾತ್ರಿ ನನ್ನ ಮನೆ ಯಲ್ಲಿಯೇ ಇದ್ದು ಬಿಡಲ್ಲ" ಎಂದ ಶರಭಯ್ಯನೆಂಬ ಆ ದೊಡ್ಡ ಮನುಷ್ಯ.

ಅಂತೆಯೇ ಅವನು ಗಾಡಿಯೆತ್ತುಗಳನ್ನು ಬಿಚ್ಚಿಸಿ, ಕುಂಬಳಕಾಯಿಗಳನ್ನು ಚಾವಡಿಯಲ್ಲಿಡಿಸಿ, ಎತ್ತುಗಳಿಗೆ ಹುಲ್ಲೂ ನೀರೂ ಕೊಡಿಸಿ, ವ್ಯಾಪಾರಿಗೆ ಒಳ್ಳೆಯ ಊಟವನ್ನೂ ಹಾಕಿಸಿ, ಮಲಗಲಿಕ್ಕೂ ಸ್ಥಳವನ್ನು ಏರ್ಪಡಿಸಿ ಕೊಟ್ಟನು.

ವ್ಯಾಪಾರಿ ಶರಭಯ್ಯನ ಆದರವನ್ನು ಮೆಚ್ಚಿ ಕೊಂಡಾಡಿ, ಮೈಚಾಚಿ ಮಲಗಿದನು. ಪ್ರಯಾಣ ದಿಂದ ಬಳಲಿದವನಾದುದರಿಂದ ಮಲಗಿದ ಕೂಡಲೇ ಗಾಢನಿದ್ರೆಗೆ ತೊಡಗಿದನು.

ಅವನು ಮರುದಿನ ಎದ್ದ ಕೂಡಲೇ ಶರಭಯ್ಯ ನಿಗೆ ಕೃತಜ್ಞತಾಪೂರ್ವಕವಾಗಿ ಕೆಲವು ಕುಂಬಳಕಾಯಿ ಗಳನ್ನು ಕೊಡೋಣವೆಂದುಕೊಂಡು ಚಾವಡಿಗೆ ಬಂದು ನೋಡಿದಾಗ, ತಾನಿಟ್ಟ ಕುಂಬಳಕಾಯಿಗಳಲ್ಲಿ

ಬಿ. ಎನ್. ರಾವ್



ಅರ್ಧಭಾಗವಷ್ಟೇ ಕಾಣಿಸಿದುವು. ತನಗೆ ಮಹಾ ಉಪಕಾರ ಮಾಡಿದನೆಂದುಕೊಂಡ ಶರಭಯ್ಯ, ಮಹಾವಂಚನೆ ಮಾಡಿದ್ದಾನೆಂಬುದು ಸ್ಪಷ್ಟವಾಯಿತು.

ವ್ಯಾಪಾರಿ ಅತ್ಯಂತ ಕೋಪದಿಂದ ಶರಭಯ್ಯನನ್ನು ನೋಡಿ, "ಏನಿದು ಶರಭಯ್ಯಾ, ಹೀಗೂ ಮೋಸ ಮಾಡಬಹುದೆ? ಬಹಳ ದಾತಾರನ ಹಾಗೆ ವೇಷ ಹಾಕಿಕೊಂಡು ನನ್ನ ಕುಂಬಳ ಕಾಯಿಗಳನ್ನು ಕದ್ದು ಕೊಳ್ಳುವಿಯಾ?" ಎಂದು ಆವೇಶದಿಂದ ಹೇಳಿದ.

ಶರಭಯ್ಯ ಒಂದಿಷ್ಟೂ ಅಳುಕದೆ, "ನಿನಗೆ ತಲೆ ಸರಿಯಿದೆಯೆ? ಬುದ್ಧಿ ಇಟ್ಟುಕೊಂಡು ಮಾತಾಡು ವಿಯಾ? ಅನ್ನ ತಿಂದ ಮನೆಗೇ ಕನ್ನ ಹಾಕುವ ಹಾಗೆ ನನ್ನಿಂದ ಉಪಕಾರ ಪಡೆದು ನನಗೆ ಕಳ್ಳತನವನ್ನು ಅಂಟಿಸುವಿಯಾ? ಛೀಛೀ! ನಿನ್ನಂಥವನನ್ನು ಇರಿಸಿ ಕೊಂಡದ್ದು ನನ್ನದೇ ತಪ್ಪು!" ಎಂದು ಜರೆದಾಡಿದ. "ಒಳ್ಳೆಯ ಮಾತಿನಲ್ಲಿ ನನ್ನ ಕುಂಬಳಕಾಯಿ ಗಳನ್ನು ಕೊಟ್ಟುಬಿಡು. ಮತ್ತೆ ನಿನ್ನ ಹತ್ತಿರ ಮಾತೇಕೆ? ನನ್ನ ಪಾಡಿಗೆ ಹೋಗುತ್ತೇನೆ" ಎಂದ ವ್ಯಾಪಾರಿ. "ಮೊದಲು ಮನೆಬಿಟ್ಟು ಹೊರಗೆ ನಡೆಯು ವಿಯೋ ಇಲ್ಲವೋ?" ಎಂದು ಶರಭಯ್ಯ ಮೇಲೆ ಮೇಲೆ ಬೀಳಲು ಹೋದ.

ಇನ್ನು ಶರಭಯ್ಯನೊಂದಿಗೆ ಮಾತಾಡಿ ಪ್ರಯೋ ಜನವಿಲ್ಲವೆಂದುಕೊಂಡು ವ್ಯಾಪಾರಿ ಉಳಿದ ಕುಂಬಳ ಕಾಯಿಗಳನ್ನು ಗಾಡಿಯ ಮೇಲೆ ಹಾಕಿಕೊಂಡು, ನೆಟ್ಟಗೆ ನ್ಯಾಯಾಧೀಶನ ಮನೆಗೆ ಹೋಗಿ ಶರಭಯ್ಯನ ಮೇಲೆ ಫಿರ್ಯಾದಿ ಮಾಡಿದನು.

ನ್ಯಾಯಾಧೀಶನು ಅವನ ಫಿರ್ಯಾದಿಯನ್ನು ಅರ್ಥಮಾಡಿಕೊಂಡು, "ನಿನ್ನ ಕುಂಬಳ ಕಾಯಿ ಗಳನ್ನು ಕದ್ದುಕೊಂಡವನು ಶರಭಯ್ಯನೇ ನಿಜವಾದರೆ ಅವು ನಿನಗೆ ಸಿಗುವ ಹಾಗೆ ಮಾಡಲು ಬಹಳ ಕಷ್ಟವೇ ನಿಲ್ಲ" ಎಂದು ಹೇಳಿ ಶರಭಯ್ಯನನ್ನು ಕರೆದುಕೊಂಡು ಬರುವಂತೆ ಆಳನ್ನು ಕಳುಹಿಸಿದನು.

ಶರಭಯ್ಯನು ಬಂದು, ನ್ಯಾಯಾಧೀಶನು ಕೇಳಿದ ಪ್ರಶ್ನೆಗಳಿಗೆ ಹೀಗೆಂದನು: "ನಿಜವಾಗಿಯೂ ನಾನು ನಿರ್ದೋಷಿ. ಈ ವ್ಯಾಪಾರಿಗೆ ಕಳೆದ ರಾತ್ರಿ ಆತಿಥ್ಯ ವಿತ್ತು, ಮಲಗಲು ಸ್ಥಳ ಕೊಟ್ಟ ಪಾಪಕ್ಕಾಗಿ ಇವನು ನನ್ನ ಮೇಲೆ ಕಳ್ಳತನದ ಅಪವಾದವನ್ನು ಹೇರು ತ್ತಾನೆ. ನನಗೆ ಕುಂಬಳಕಾಯಿ ಕದಿಯುವಂತಹ ದುಸ್ಥಿತಿಯೇ ಇಲ್ಲ. ನನ್ನ ತೋಟದಲ್ಲಿ ಬೆಳೆದ ಕುಂಬಳ ಕಾಯಿಗಳೇ ಮನೆಯಲ್ಲಿ ಹೇರಳವಾಗಿವೆ"

"ನೀನು ಹೇಳಿದುದೆಲ್ಲಾ ನಿಜವೆಂದೇ ನನಗು ತೋರುತ್ತದೆ. ಆದರೂ ನೀನು ನಿರ್ದೋಷಿ ಎಂಬು ದನ್ನು ನಿರೂಪಿಸಲಿಕ್ಕಾಗಿ, ನಿನ್ನ ತೋಟದಲ್ಲಿ ಬೆಳೆದ ಒಂದು ಕುಂಬಳ ಕಾಯಿಯನ್ನು ಇಲ್ಲಿಗೆ ತೆಗೆದು ಕೊಂಡು ಬಾ" ಎಂದ ನ್ಯಾಯಾಧೀಶ.

ಹಾಗೆಯೇ ತರುವೆನೆಂದು ಶರಭಯ್ಯ ಹೊರಟು ಹೋದನು. ಅವನು ತಿರುಗಿ ಬರುವುದರೊಳಗೆ ನ್ಯಾಯಾಧೀಶನು ದಾಸಯ್ಯನೆಂಬ ಬೀದೀ ನಾಟಕದ

ನನ್ನೂ, ವೈದ್ಯನನ್ನೂ ಕರೆದು ಅವರಿಬ್ಬರಿಗೂ ಏನು ಮಾಡಬೇಕೆಂಬುದನ್ನು ಹೇಳಿಟ್ಟನು.

ಶರಭಯ್ಯ ಕುಂಬಳಕಾಯಿಯೊಂದಿಗೆ ತಿರುಗಿ ಬಂದನು. ನ್ಯಾಯಾಧೀಶನು ವ್ಯಾಪಾರಿಯ ಗಾಡಿಯಿಂದ ಮತ್ತೊಂದು ಕುಂಬಳಕಾಯಿಯನ್ನು ತರಿಸಿ "ದಾಸಯ್ಯ, ನೀನು ಚೆನ್ನಾಗಿ ತಾರತಮ್ಯ ತಿಳಿದವನು. ಈ ಎರಡು ಕುಂಬಳಕಾಯಿಗಳೂ ಒಂದೇ ಜಾತಿಯವೋ ಬೇರೆಬೇರೆ ಜಾತಿಯದೋ? ಸರಿಯಾಗಿ ಹೇಳುವಿಯಾ?" ಎಂದು ಕೇಳಿದನು.

"ರುಚಿ ನೋಡದೆ ಹೇಳಲಾಗುವುದಿಲ್ಲ ದೊರೆಗಳೇ" ಎಂದು ಹೇಳಿ ದಾಸಯ್ಯ ಒಂದು ಕತ್ತಿ ತೆಗೆದುಕೊಂಡು, ಶರಭಯ್ಯ ತಂದ ಕುಂಬಳ ಕಾಯಿಯಿಂದ ಒಂದು ಚೂರು ಕೊಯಿದು ಬಾಯಿಗೆ ಹಾಕಿ ಅಗಿದು ನುಂಗಿದನು. ಮರುಕ್ಷಣವೇ ಅವನು ಕಣ್ಣು ಮೇಲೆ ಮಾಡಿಕೊಂಡು, ಕೈ ಕಾಲು ಹೊಡೆದುಕೊಳ್ಳುತ್ತ "ಉರಿ, ಅಯ್ಯೊ!" ಎಂದು ಕೂಗಲಾರಂಭಿಸಿದನು.

ನ್ಯಾಯಾಧೀಶನು ವೈದ್ಯನ ಕಡೆಗೆ ತಿರುಗಿ, "ವೈದ್ಯವರ್ಯಗಳೇ, ಇವನಿಗೇನಾಯಿತೋ ನೋಡಿರಿ. ಸಮಯಕ್ಕೆ ದೇವರ ಹಾಗೆ ಸಮೀಪವಿದ್ದೀರಿ! ಬೇಗ ನೋಡಿರಿ!" ಎಂದನು.

ವೈದ್ಯನು ಶರಭಯ್ಯ ತಂದ ಆ ಕುಂಬಳಕಾಯಿಯನ್ನು ಪರೀಕ್ಷೆ ಮಾಡಿ, "ಅಯ್ಯಯ್ಯೊ! ಇದು ವಿಷಪೂರಿತ ಕುಂಬಳಕಾಯಿ. ಇವನಿಗೆ ಬೇಗನೇ ಪ್ರತ್ಯೌಷಧ ಕೊಡಬೇಕು" ಎಂದು ಹೇಳಿ ದಾಸಯ್ಯನನ್ನು ಮೆಲ್ಲನೆ ನಡೆಯಿಸಿಕೊಂಡು ಹೊರಟು ಹೋದನು.

ನ್ಯಾಯಾಧೀಶನು ಶರಭಯ್ಯನನ್ನು ಕೋಪದಿಂದ ನೋಡುತ್ತ, "ಶರಭಯ್ಯ! ಇಂಥ ಕೆಲಸವೋ ನೀನು ಮಾಡುವುದು? ವಿಷಪೂರಿತ ಕುಂಬಳಕಾಯಿಗಳನ್ನು ಬೆಳೆಸಿ ಜನರನ್ನು ಕೊಲ್ಲಲು ನೋಡುವಿಯಾ? ನಿನ್ನನ್ನು ಪ್ರತ್ಯೇಕ ವಿಚಾರಣೆಗೆ ಗುರಿಪಡಿಸಬೇಕಾಗಿದೆ. ಸದ್ಯ ಇವನನ್ನು ಸೆರೆಮನೆಯಲ್ಲಿಡಿರಿ!" ಎಂದನು.

ಶರಭಯ್ಯ ಗಾಬರಿಯಾಗಿ, "ಇದು ನಾನು ಬೆಳೆಸಿದ ಕುಂಬಳಕಾಯಿ ಅಲ್ಲ ಮಹಾಪ್ರಭುಗಳೇ, ಇವನೇ ತಂದದ್ದು. ಇದು ಇಂಥಾ ವಿಷದ್ದೆಂದು ತಿಳಿದಿದ್ದರೆ ಅಡಗಿಸಿಡುತ್ತಿರಲಿಲ್ಲ. ನೀವು ಕೊಡುವ ಶಿಕ್ಷೆಯನ್ನು ಈ ಕುಂಬಳಕಾಯಿ ವ್ಯಾಪಾರಿಗೇ ಕೊಡಬೇಕು. ನನ್ನನ್ನು ಕ್ಷಮಿಸಿ ಪ್ರಭುಗಳೇ!" ಎಂದು ತಪ್ಪೊಪ್ಪಿ ಬೇಡಿಕೊಂಡನು.

"ನೀನು ಕಳ್ಳತನವನ್ನು ಒಪ್ಪಿಕೊಂಡೆಯಲ್ಲವೆ? ಈ ವ್ಯಾಪಾರಿಗೆ ಎಲ್ಲಾ ಕಾಯಿಗಳನ್ನೂ ಕೊಟ್ಟುಬಿಡು. ಕಳ್ಳತನ ಮಾಡಿದ್ದಕ್ಕೆ ಈ ಸಾರಿ ನಿನ್ನನ್ನು ಜುಲುಮಾನೆ ಹಾಕಿ ಬಿಟ್ಟುಬಿಡುತ್ತೇನೆ" ಎಂದನು ನ್ಯಾಯಾಧೀಶನು ಕುಂಬಳಕಾಯಿ ವ್ಯಾಪಾರಿಗೆ ಅವನ ಕುಂಬಳಕಾಯಿಗಳು ದೊರೆಯುವಂತೆ ಮಾಡಿದನು.





# ಕಾಪಾಲಿನಿ

ಅನೇಕ ವರ್ಷಗಳ ಹಿಂದೆ ಕಾಶ್ಮೀರ ದೇಶದಲ್ಲಿ ಒಬ್ಬ ಉತ್ತಮ ಕ್ಷತ್ರಿಯನಿದ್ದ. ಅವನಿಗೆ ಸೀಮಂತಿನಿ ಎಂಬ ಒಬ್ಬಳೇ ಒಬ್ಬಳು ಮಗಳಿದ್ದಳು. ತುಂಬ ಚೆಲುವೆ. ಆದರೆ ಅವಳ ತಂದೆ ಬೇಗನೇ ತೀರಿಹೋದನು. ಅದರಿಂದ ಆತನ ಸ್ವಂತ ಆಸ್ತಿಯಾದ ಅರಣ್ಯವೂ, ವನವೂ, ಕೋಟೆಯೂ ಸೀಮಂತಿನಿಗೇ ಸ್ವಂತವಾದುವು. ಆದುದರಿಂದ ಆ ಪ್ರಾಂತದಲ್ಲಿರುವ ಅನೇಕ ಮಂದಿ ಕುಲೀನ ಯುವಕರು, ಅವಳನ್ನೇ ವಿವಾಹ ಮಾಡಿಕೊಳ್ಳಬೇಕೆಂದು ಪ್ರಯತ್ನ ಮಾಡಿದರು. ಅವರಲ್ಲಿ ಗುಣದೇವನೆಂಬವನು ಅವಳನ್ನು ನಿಜವಾಗಿಯೂ ಪ್ರೇಮಿಸಿದ್ದನು. ಆದರೆ ಸೀಮಂತಿನಿಗೆ ವಿವಾಹ ಮಾಡಿಕೊಳ್ಳುವ ಆಲೋಚನೆ ಇರಲಿಲ್ಲ. ಅವಳು ಎಲ್ಲರನ್ನೂ ನಿರಾಕರಿಸಿಬಿಟ್ಟಳು.

ಸೀಮಂತಿನಿಗೆ ಯಾವಾಗಲೂ ಬೆಟ್ಟಗುಡ್ಡ ಅರಣ್ಯ ಅಲ್ಲಿರುವ ವಿಚಿತ್ರ ಪ್ರಾಣಿಗಳು, ಪಕ್ಷಿಗಳು ಇವೇ ಆಕರ್ಷಣೆಯ ವಿಷಯಗಳಾಗಿದ್ದುವು. ಅವಳು ಆಗಾಗ ಕಾಲುನಡಿಗೆಯಿಂದಾಗಲೀ, ಕುದುರೆಯ ಮೇಲಿಂದಾಗಲೀ ಹೋಗಿ ಸ್ವಲ್ಪ ದೂರದಲ್ಲಿರುವ ಗರುಡ ಶಿಖರದ ಮೇಲೆ ಕುಳಿತುಕೊಂಡು ಸೃಷ್ಟಿ ಸೌಂದರ್ಯ ನೋಡುವಳು. ಅಷ್ಟೆತ್ತರದಿಂದ ಕಾಣಿಸುವ ದೃಶ್ಯಗಳೆಲ್ಲವನ್ನೂ ನೋಡಿ ಆನಂದಿಸುತ್ತ ಹೊತ್ತು ಹೋಗುವುದನ್ನೇ ಮರೆಯುವಳು.

ಈ ವಿಧವಾಗಿ ಪ್ರಕೃತಿಯೊಂದಿಗೆ ಲೀನವಾಗುತ್ತಿದ್ದ ಸೀಮಂತಿನಿಗೆ ಕಾಪಾಲಿಕ ಶಕ್ತಿಗಳನ್ನು ಸಾಧಿಸಬೇಕೆಂಬ ಕೋರಿಕೆ, ಹುಟ್ಟಿ, ಕ್ರಮಕ್ರಮವಾಗಿ ಬೆಳೆಯತೊಡಗಿತು. ಬೇತಾಳವನ್ನು ವಶಪಡಿಸಿಕೊಂಡು, ಪರಕಾಯ ಪ್ರವೇಶ, ಕಾಮರೂಪ, ಕಾಮಗಮನ ಮುಂತಾದ ಇನ್ನೂ ಇತರ ಅದ್ಭುತ ಸಿದ್ಧಿಗಳನ್ನು ಸಾಧಿಸಬೇಕೆಂದು ಅವಳಿಗೆ ತೋರಿತು. ಅದಕ್ಕಾಗಿ ವಿಚಿತ್ರವಾದ ಪೂಜೆಗಳನ್ನೂ, ವಿಲಕ್ಷಣವಾದ ಆಹಾರಗಳನ್ನೂ, ಉಪಾಸನೆಗಳನ್ನೂ ಪ್ರಾರಂಭ ಮಾಡಿದಳು. ಒಂದೊಂದುಸಾರಿ ಅವಳು ಚಂದ್ರನ ಕಡೆಗೆ ನಿಶ್ಚಲವಾಗಿ ನೋಡಿ, ಸ್ಮೃತಿ ತಪ್ಪಿ ಬೀಳುವಳು. ಏನೇನೋ ಮೂಲಿಕೆಗಳಿಂದ ಕಷಾಯಗಳನ್ನು ಮಾಡಿ ಕುಡಿಯುವಳು. ತನ್ನ ಶರೀರವನ್ನು ಕ್ರೂರವಾದ ಶಿಕ್ಷೆಗಳಿಗೂ ಗುರಿಪಡಿಸುವಳು. ಈ ಬಗೆಯ ಆಚರಣೆಗಳಿಂದ ಅವಳಿಗೆ ಕೆಲವು ಅದ್ಭುತವಾದ ಶಕ್ತಿಗಳು ವಶವಾದುವು. ಈ ಸಮಾಚಾರವನ್ನು ತಿಳಿದಮೇಲೆ ಗುಣದೇವನಿಗೆ

ಕೆ. ವಸಂತಕುಮಾರಿ

ಬಹಳ ಸಂಕಟವಾಯಿತು. "ಸೀಮಂತಿನಿ ಸಾಮಾನ್ಯ ಮಾನವ ಸ್ತ್ರೀಯನ್ನು ಮೀರಿ ಹೋಗುತ್ತಿದ್ದಾಳೆ. ಸಾಮಾನ್ಯ ಸ್ಥಿತಿಯಲ್ಲಿರುವಾಗಲೇ ನನ್ನನ್ನು ಮದುವೆಯಾಗಲು ನಿರಾಕರಿಸಿದಳು; ಈ ಸ್ಥಿತಿಯಲ್ಲಿ ಇನ್ನೇನು ಮದುವೆಯಾಗುವಳು?" ಎಂದು ನಿರಾಶೆಪಟ್ಟನು.

ಆದರೆ ಅವಳನ್ನು ಹೇಗಾದರೂ ಸಾಮಾನ್ಯ ಮಾನವಿಯ ಸ್ಥಿತಿಗೆ ತರಬೇಕೆಂಬ ಆಲೋಚನೆಯೂ ಅವನಿಗುಂಟಾಯಿತು. ಸೀಮಂತಿನಿ ಎಲ್ಲಿ ತಿರುಗುತ್ತಿದ್ದಾಳೆ? ಏನೇನು ಮಾಡುತ್ತಾಳೆ? ಅವಳ ಪೂಜೆಯ ವಿಧಾನಗಳು ಹೇಗೆ? ಮುಂತಾದ ಸಂಗತಿಗಳನ್ನು ಅವನು ಗಮನಿಸಿಕೊಂಡೇ ಇದ್ದನು.

ತಿಂಗಳುಗಳು ಉರುಳುತ್ತಿದ್ದಂತೆ ಸೀಮಂತಿನಿಯನ್ನು ಕಾಪಾಡಬೇಕೆಂಬ ಬಯಕೆ ಗುಣದೇವನಲ್ಲಿ ಹೆಚ್ಚಾಯಿತು. ಕೊನೆಗೆ ಅವನು ಪಿಂಗಳಿ ಎಂಬ ಒಬ್ಬಳು ಮಂತ್ರವಾದಿನಿಯ ಸಹಕಾರವನ್ನು ಕೇಳಿದನು.

ಪಿಂಗಳಿ ದೊಡ್ಡ ಮಂತ್ರವಾದಿನಿಯೆಂದು ಅನೇಕರು ಹೇಳುತ್ತಿದ್ದರು. ಆದರೆ ಅವಳಿರುವುದು ವೈದ್ಯಳ ಹಾಗೆಯೇ. ಅವಳು ತನ್ನ ತೋಟದಲ್ಲಿ ವಿಧವಿಧವಾದ ಮೂಲಿಕೆಗಳನ್ನು ಬೆಳೆಸಿ ಬೇರೆ ಬೇರೆ ಬಗೆಯ ಔಷಧಗಳನ್ನು ತಯಾರಿಸುತ್ತಿದ್ದಳು. ಅವಳು ಗುಣದೇವನು ಹೇಳಿದ ಮಾತುಗಳನ್ನು ಕೇಳಿ, "ಶ್ರೀಮಂತಿನಿಗೆ ಕಾಪಾಲಿನಿ ಆಗಬೇಕೆಂದಿದ್ದರೆ ನಾವೇಕೆ ತಡೆಯಾಗಬೇಕು?" ಎಂದು ಕೇಳಿದಳು.

"ಅದು ನನಗೆ ಇಷ್ಟವಿಲ್ಲದಿರುವುದರಿಂದಲೇ. ತಿಳಿಯಿತೇನು? ನೀನು ಕೇಳಿದಷ್ಟು ಹಣ ಕೊಡುತ್ತೇನೆ. ಅವಳನ್ನು ಸಾಮಾನ್ಯ ಮನುಷ್ಯಳನ್ನಾಗಿ ಮಾಡಬಲ್ಲೆಯಾ? ಅಷ್ಟೊಂದು ಸುಂದರಿಯೂ, ಬುದ್ಧಿವಂತೆಯೂ ಆದ ಸೀಮಂತಿನಿ ಕಾಪಾಲಿನಿಯಾಗಿ ಸಾಯುವುದನ್ನು ನಾನು ನೋಡಲಾರೆ. ಅದು ಅವಳಿಗೊಂದು ದೊಡ್ಡ ಕಳಂಕ" ಎಂದ ಗುಣದೇವ. "ಏಕೆ? ಕಾಪಾಲಿನಿಯಾಗಿ ಅದ್ಭುತಗಳೊಂದಿಗೆ



ಜೀವಿಸುವುದರಲ್ಲಿ ಆನಂದವಿಲ್ಲವೆಂದು ಭಾವಿಸುವಿಯಾ?" ಎಂದು ಕೇಳಿದಳು ಪಿಂಗಳಿ.

"ಸಂತೋಷವಿರಬಹುದು; ಆದರೆ ಸುಖವಿರಲಾರದು" ಎಂದ ಗುಣದೇವ.

"ಅದು ನಿಜ. ಅವಳು ನಿನ್ನ ಹೆಂಡತಿಯಾಗಿದ್ದರೆ ಹೆಚ್ಚಿಗೆ ಸುಖಪಡುತ್ತಾಳೆ" ಎಂದು ಪಿಂಗಳಿ ಹೇಳಲು, "ಅದಕ್ಕಾಗಿಯೇ ಅವಳನ್ನು ನನ್ನ ಹೆಂಡತಿಯಾಗುವಂತೆ ಮಾಡಬೇಕು" ಎಂದ ಗುಣದೇವ.

"ಸಹಾಯ ಮಾಡುತ್ತೇನೆ. ನೀನು ನಾನು ಹೇಳಿದ ಹಾಗೆ ಮಾಡು. ಬರುವ ಅಮಾವಾಸ್ಯೆಯ ದಿನ ಬೇಟೆ ನಾಯಿಗಳನ್ನು ಕರೆದುಕೊಂಡು ಅರಣ್ಯಕ್ಕೆ ಬೇಟೆಯಾಡಲು ಹೋಗು. ನೀನು ಯಾವ ಮೃಗವನ್ನೂ ಬೇಟೆಯಾಡಬೇಕಾಗಿಲ್ಲ; ಬಿಳೀ ಬಣ್ಣದ ಜಿಂಕೆ ಕಾಣುವವರೆಗೂ ಕಾಡಿನೊಳಗೆಲ್ಲಾ ಗಾಳಿಸು. ಬಿಳೀ ಜಿಂಕೆ ಕಂಡ ಕೂಡಲೇ ಅದನ್ನು ಬೆನ್ನಟ್ಟಿ ಹಿಡಿ. ಅದನ್ನು ಗಾಯಪಡಿಸದೆ ಹಿಡಿದು ಹಗ್ಗ ಕಟ್ಟಿ ಎಳೆದು

ತಂದು ನಿನ್ನ ಮನೆಯ ಕೋಣೆಯೊಳಗೆ ರಾತ್ರಿ ಪೂರಾ ಬಂಧಿಸಿಡು. ಉಳಿದುದೆಲ್ಲ ನಾನು ನೋಡಿಕೊಳ್ಳುತ್ತೇನೆ" ಎಂದಳು ಪಿಂಗಳಿ.

ಅವಳು ಅವನನ್ನು ತೋಟ ದಾಟಿಸಿ ಕಳುಹಿಸಿ ಕೊಟ್ಟು ಹಿಂದಿರುಗುವಾಗ. ಅವಳ ಎಡದ ಕಾಲು ಕುಂಟುತ್ತಿರುವುದನ್ನು ಗುಣದೇವನು ಗಮನಿಸಿದನು.

ಪಿಂಗಳಿ ಹೇಳಿದಂತೆ ಅವನು ಅಮಾವಾಸ್ಯೆಯ ದಿನ ತನ್ನ ಬೇಟೆ ನಾಯಿಗಳೊಂದಿಗೆ ಅರಣ್ಯಕ್ಕೆ ಹೋದನು. ಅವನು ಅರಣ್ಯದೊಳಗೆಲ್ಲಾ ಗಾಳಿಸುತ್ತಿರುವಾಗ ಒಂದು ಬಿಳೀ ಬಣ್ಣದ ಜಿಂಕೆ ಕಂಡೇ ಕಾಣಿಸಿತು. ಕೂಡಲೇ ತನ್ನ ಬೇಟೆ ನಾಯಿಗಳನ್ನು ಅದರ ಕಡೆಗೆ ಓಡಿಸಿದನು. ಜಿಂಕೆ ನಾಯಿಗಳಿಗೆ ಸಿಕ್ಕದೆ, ಶರವೇಗದಿಂದ ಓಡತೊಡಗಿತು.

ಸ್ವಲ್ಪ ಹೊತ್ತಿಗೆ ಒಂದು ನಾಯಿಯ ಹೊರತು ಉಳಿದ ನಾಯಿಗಳೆಲ್ಲ ಹಿಂದೆ ಬಿದ್ದುವು. ಜಿಂಕೆಯ ಸಮೀಪದಲ್ಲಿ ಓಡುತ್ತಿರುವ ಆ ನಾಯಿ ತನ್ನದಲ್ಲವೆಂದು ಗುಣದೇವನಿಗೆ ತೋರಿತು. ಅದು ಅಷ್ಟು ಜೋರಿನಿಂದ ಓಡುತ್ತಿರುವಾಗಲೂ ಎಡದ ಕಾಲಿನಿಂದ ಕುಂಟುತ್ತಿರುವುದನ್ನು ನೋಡಿದನು.

ಬೇಗದಲ್ಲೇ ಆ ನಾಯಿ ಜಿಂಕೆಯ ಹಿಂದಿನ ಕಾಲನ್ನು ಬಾಯಿಯಿಂದ ಹಿಡಿದು ನಿಲ್ಲಿಸಿತು. ಗುಣದೇವನು ಕುದುರೆಯ ಮೇಲಿನಿಂದ ಓಡಿಬಂದು ಆ ಜಿಂಕೆಯ ಕೊರಳಿಗೆ ಉರುಳು ಹಾಕಿದನು. ತರುವಾಯ ಜಿಂಕೆ ಏನೂ ತಂಟೆ ಮಾಡದೆ ಅವನ ಹಿಂದೆಯೇ ಅವನ ಮನೆಗೆ ಬಂದಿತು. ಆ ಜಿಂಕೆಯನ್ನು ಹಿಡಿದ ಬೇಟೆ ನಾಯಿ ಮಾತ್ರ ಎತ್ತಕಡೆಗೆ ಹೋಯಿತೆಂಬುದನ್ನು ಗುಣದೇವನು ಗಮನಿಸಲಿಲ್ಲ.

ಅವನು ಜಿಂಕೆಯನ್ನು ಒಂದು ಕೋಣೆಯೊಳಗೆ ಹೊಗಿಸಿ ಬಾಗಿಲು ಭದ್ರಪಡಿಸಿ, ತನ್ನ ಮಲಗುವ ಕೋಣೆಯಲ್ಲಿ ಮಲಗಿ ನಿದ್ದೆಮಾಡಿದನು. ಬೆಳಿಂಜಾವದಲ್ಲಿ ಅವನಿಗೆ ನಿದ್ರಾಭಂಗವಾದಾಗ ಪ್ರಪಂಚವೆಲ್ಲಾ ತಲೆಕೆಳಗಾಗುವಂತೆ ತೋರಿತು. ಹೊರಗೆ ದೊಡ್ಡ ತುಫಾನು ಹೊಡೆಯುತ್ತಿದೆಯೋ. ಮನೆಯ ಮೇಲೆ ಸಿಡಿಲುಗಳೇ ಬೀಳುತ್ತಿವೆಯೋ, ಅಥವಾ ಭೂಕಂಪವೋ ಎಂಬ ಹಾಗೆ ತೋರಿತು.

ಆದರೆ ಅಂತಹುದೇನೂ ಇರಲಿಲ್ಲ. ಅದುವರೆಗೆ ಸೀಮಂತಿನಿಗೆ ವಶವಾಗಿದ್ದ ಪಿಶಾಚಿಗಳೆಲ್ಲಾ ತಮ್ಮ ತಮ್ಮ ಶಕ್ತಿಗಳೊಂದಿಗೆ ಅವಳನ್ನು ತೊರೆದು ಹೋಗುತ್ತಿರುವ ಗಲಾಟೆಯದು.

ಗುಣದೇವನು ಜಿಂಕೆಯನ್ನಿಟ್ಟ ಕೋಣೆಯೊಳಗೆ ಹೋಗಿ ನೋಡಿದಾಗ ಅಲ್ಲಿ ಸೀಮಂತಿನಿ ಇದ್ದಳು. ಅವಳು ಅವನನ್ನು ಮದುವೆಯಾಗಲು ಸುಲಭವಾಗಿ ಒಪ್ಪಿದಳು. ಮುಂದಿನ ಶುಭದಿನದಲ್ಲಿ ಅವರಿಬ್ಬರೂ ಮದುವೆಯಾಗಿ ಬಹಳಕಾಲ ಸುಖವಾಗಿ ಜೀವಿಸಿದರು.






# ಶಿಲಾರಥ

## ೧೮

[ ವಿಘ್ನೇಶ್ವರ ಪೂಜಾರಿ ಏರಿಕೊಂಡ ಆನೆಯ ಮೇಲೆ ಮರಗಳ ಮೇಲಿನಿಂದ ತೈಲವನ್ನು ಚೆಲ್ಲಿಸಿ ಬೆಂಕಿ ಹಚ್ಚಿಸಿದರು. ನಿತ್ಯಾನಂದ ರಾಜನು ತನ್ನ ಸೈನಿಕರಿಂದ ಆಟವಿಕರನ್ನು ನಾಶ ಪಡಿಸಲು ನೋಡಿದನು. ಆಗ ಖಡ್ಗವರ್ಮ ಜೀವದತ್ತರು ಆಟವಿಕರ ನಾಯಕನೆನಿಸುವವನೊಬ್ಬನನ್ನು ಸಿದ್ಧಪಡಿಸಿ ರಾಜನಿಗಿದಿರಾಗಿ ನಿಲ್ಲಿಸಿದರು. ]

[illegible] ಇದಿರು ಎದೆಯುಬ್ಬಿಸಿ ನಿಂತಿರುವ ಆಟವಿಕರ [illegible]ಕನನ್ನು ಜೀವದತ್ತನು ಚೆನ್ನಾಗಿ ಪರೀಕ್ಷಿಸಿ ನೋಡಿ [illegible], ಆ ಆಟವಿಕನ ತೀಕ್ಷ್ಣವಾದ ದೃಷ್ಟಿಯನ್ನೂ, [illegible]ಯ ಭಾವವನ್ನೂ ನೋಡಿ ಜೀವದತ್ತನಿಗೆ [illegible] ಬಗೆಯ ನಂಬುಗೆಯುಂಟಾಯಿತು. ಅವನು [illegible] ಆಟವಿಕರನ್ನು ಸಂಯಮದಲ್ಲಿಟ್ಟು ನಡೆಸ [illegible]ದುಕೊಂಡು, “ಒಳ್ಳೆಯದು, ಎಚ್ಚರದಲ್ಲಿರು. [illegible]ಬಿದ್ದರೆ ನಿನ್ನ ಕಡೆಯವರೆಲ್ಲಾ ರಾಜನ ಸೈನಿಕ[illegible] ಎದುರಿಸಲು ಸಿದ್ಧರಾಗಿರಬೇಕಾದೀತು. ಆದರೆ, [illegible]! ನೀವಾಗಿ ಮಾತ್ರ ಕಾಲು ಕೆದರಿ ಯುದ್ಧಕ್ಕೆ ಹೋಗಬೇಡಿ!” ಎಂದು ಹೇಳಿ ಜೀವದತ್ತನು ವಿಘ್ನೇಶ್ವರ ಪೂಜಾರಿಯನ್ನೂ, ಸ್ವರ್ಣಾಚಾರಿಯನ್ನೂ ಬಳಿಗೆ ಕರೆದು, “ನೀವು ನಮ್ಮ ಬಳಿಯಲ್ಲೇ ಇರಿ. ತಪ್ಪಿಗಿಪ್ಪಿ ಹೋದರೆ ಅಪಾಯದಲ್ಲಿ ಬೀಳುವಿರಿ. ಈಗ ನಿಮಗೆ ನಮ್ಮಿಬ್ಬರ ಹೊರತು ಇಲ್ಲಿ ಬೇರೆ ಯಾರೂ ರಕ್ಷಕರಿಲ್ಲವೆಂಬ ಸಂಗತಿ ಗೊತ್ತಿದೆಯಷ್ಟೆ?” ಎಂದನು.

“ಹೌದು ಹೌದು. ನಾವು ಬಹಳ ಫಜೀತಿಯಲ್ಲಿದ್ದೇವೆ. ಅತ್ತ ರಾಜನೂ ಇತ್ತ ಆಟವಿಕರೂ ನಮ್ಮನ್ನು ಕೊಲ್ಲಲು ನೋಡುತಿದ್ದಾರೆ. ನೀವೇ ನಮ್ಮನ್ನು



ಕಾಪಾಡುವ ದೇವರು !" ಎಂದು ವಿಘ್ನೇಶ್ವರಪೂಜಾರಿ ಕಣ್ಣೀರು ತುಂಬಿಕೊಂಡನು.

"ಇನ್ನು ಮೇಲೆ ನಮಗೇನು ದಾರಿ ?" ಎಂದು ಸ್ವರ್ಣಾಚಾರಿ ದುಃಖದಿಂದ ಕೇಳಿದ.

"ಮೊದಲು ನಗರದ ದ್ವಾರದಿಂದ ಪಾರಾಗಬೇಕು. ಆಮೇಲೆ ನಿಮ್ಮ ದಾರಿಯನ್ನು ಕುರಿತು ಆಲೋಚನೆ ಮಾಡೋಣ. ನಮ್ಮ ಬಳಿಯಲ್ಲಿರುವವರೆಗೆ ನಿಮಗೆ ಆಟವಿಕರಿಂದ ಅಪಾಯ ಬಾರದು. ರಾಜನ ವಿಷಯ ನಾವು ನೋಡಿಕೊಳ್ಳುತ್ತೇವೆ. ಭಯಪಡಬೇಡಿ" ಎಂದ ಜೀವದತ್ತ.

ಆಗ ನಿತ್ಯಾನಂದ ರಾಜನು ಉಚ್ಚ ಕಂಠದಿಂದ "ಎಲೈ ಮಹಾಶೂರರೆ, ಆ ಕಾಡುಮನುಷ್ಯರನ್ನೆಲ್ಲಾ ನೀವೇ ನಿರಾಯುಧರನ್ನಾಗಿ ಮಾಡಿಸಿಬಿಡಿ. ಇಲ್ಲದಿದ್ದರೆ ದಾರಿ ಬಿಟ್ಟು ಬದಿಗೆ ನಿಲ್ಲಿರಿ, ನಮ್ಮ ಸೈನಿಕರೇ ಆ ಕೆಲಸ ಮಾಡಿಬಿಡುತ್ತಾರೆ" ಎಂದನು.

"ನಿಮ್ಮ ಉದ್ದೇಶ ನಮಗೆ ಗೊತ್ತಾಗಿದೆ! ಮೊದಲು ಈ ಆಟವಿಕರನ್ನೆಲ್ಲಾ ಒಳ್ಳೆಯ ಮಾತಿನಲ್ಲಿ ನಿರಾಯುಧರನ್ನಾಗಿ ಮಾಡಿ, ಆಮೇಲೆ ಅವರನ್ನು ಚಿತ್ರವಧೆ ಮಾಡಬೇಕೆಂಬುದು ನಿಮ್ಮ ಆಲೋಚನೆ. ಅದು ಒಳ್ಳೆಯದಲ್ಲ. ಹಾಗೆ ನಡೆಯಲು ನಾವು ಬಿಡಲಾರೆವು. ಒಂದು ವೇಳೆ ನಿಮಗೆ ಯುದ್ಧವೇ ಬೇಕಾಗಿರುವ ಪಕ್ಷದಲ್ಲಿ ಒಂದು ಮಾಡಿ; ನೀವೂ ಆಟವಿಕರೂ ನಗರದ ಹೊರಭಾಗದಲ್ಲಿ ಯುದ್ಧ ಮಾಡಿರಿ. ನಾವು ಪ್ರೇಕ್ಷಕರಾಗಿದ್ದು ಫಲಿತವನ್ನು ನೋಡುತ್ತೇವೆ" ಎಂದು ಗಟ್ಟಿಯಾಗಿ ಹೇಳಿದ ಜೀವದತ್ತ.

"ನನ್ನ ರಾಜ್ಯದಲ್ಲಿ, ನನ್ನ ನಗರದಲ್ಲಿ ನನ್ನನ್ನೇ ಆಜ್ಞಾಪಿಸುವುದೇ ?" ಎಂದು ನಿತ್ಯಾನಂದ ರಾಜನು ಚೀರಿದ. ಅದಕ್ಕೆ ಉತ್ತರವಾಗಿ ಖಡ್ಗವರ್ಮನು ಕತ್ತಿಯನ್ನು ಸರ್ರನೆ ಸೆಳೆದು ಕುಣಿಸುತ್ತ, "ಲೋ ರಾಜಾ! ನಿನ್ನ ಹಳಸಲು ಹರಟೆ ಪುರಾಣವನ್ನು ಕಟ್ಟಿಡು. ನಿನ್ನನ್ನೂ ನಿನ್ನ ಕಿರೀಟವನ್ನೂ ರಕ್ಷಿಸಿದವರು ನಾವು! ಇಲ್ಲಿ ಈಗ ನಾವೇ ರಾಜರು. ನೆನಪಿರಲಿ!" ಎಂದು ಆಟವಿಕರ ಕಡೆಗೆ ತಿರುಗಿ, "ಹೂಂ, ಎಲ್ಲರೂ ನಗರದ ದ್ವಾರದ ಕಡೆಗೆ ನಡೆಯಿರಿ" ಎಂದನು.

ಆಟವಿಕರ ಗುಂಪು ನಾಯಕನ ಪ್ರಮುಖತೆಯಲ್ಲಿ ಮಹಾದ್ವಾರದ ಕಡೆಗೆ ಸಾಗಿತು. ಜೀವದತ್ತನು ಪೂಜಾರಿಯನ್ನೂ ಸ್ವರ್ಣಾಚಾರಿಯನ್ನೂ ಅವರ ಹಿಂದೆ ನಡೆಯುವಂತೆ ಹೇಳಿ, ರಾಜನನ್ನು ನೋಡಿ, "ಮಹಾರಾಜಾ, ಬೇಕಾದರೆ ನಗರದ್ವಾರದ ಹೊರಗಡೆಯ ಬಯಲಲ್ಲಿ ನೀವು ಆಟವಿಕರೊಂದಿಗೆ ಹೋರಾಡಬಹುದು. ನಿಮ್ಮ ಸೈನಿಕರನ್ನು ಆಯತ್ತಗೊಳಿಸಿಕೊಂಡು ಬನ್ನಿ. ಯಾರಿಗೆ ವಿಜಯವಾಗುವುದೆಂಬುದನ್ನು ನೋಡಿ, ನಮ್ಮ ಪಾಡಿಗೆ ಹೋಗಿಬಿಡುತ್ತೇವೆ" ಎಂದನು.

ರಾಜನು ಬಹಳ ಕೋಪದಿಂದ, ನಗರದ್ವಾರದ ಕಡೆಗೆ ಹೋಗುವಂತೆ ತನ್ನ ಸೈನಿಕರಿಗೆ ಆಜ್ಞೆ ಮಾಡಿದನು. ಸ್ವಲ್ಪ ಹೊತ್ತಿಗೆ ಆಟವಿಕರೂ, ಸೈನಿಕರೂ

ರವನ್ನು ದಾಟಿ ಹೊರಗಿನ ಮೈದಾನದಲ್ಲಿ ತುಸು ರ ಸಾಗಿ ತಿರುಗಿ ಸಾಲುಗಟ್ಟಿ ಯುದ್ಧ ಸನ್ನದರಾಗಿ ತರು. ರಾಜನ ಸೈನಿಕರೂ ಮೈದಾನ ದ್ವಾರದ ರೆಗೆ ಬಂದು ಗುಂಪಾಗಿ ನಿಂತರು. ಖಡ್ಗವರ್ಮ ವದತ್ತರು. ಅಕ್ಕಪಕ್ಕಗಳಲ್ಲಿ ಸ್ವರ್ಣಾಚಾರಿ ಮತ್ತು ಚಾರಿಗಳನ್ನು ನಿಲ್ಲಿಸಿಕೊಂಡು ಎರಡೂ ಗುಂಪಿನ ಧ್ಯದ ಖಾಲೀ ಸ್ಥಳದಲ್ಲಿ ನಿಂತರು.

ನಿತ್ಯಾನಂದ ರಾಜನು ಪಕ್ಕದಲ್ಲಿರುವ ಮಂತ್ರಿ ಗು ಸೇನಾನಾಯಕರನ್ನು ನೋಡಿ ತಲೆಯಾಡಿಸಿ, ಡ್ಗವರ್ಮ ಜೀವದತ್ತರೊಂದಿಗೆ, "ಓ ಮಹಾ ರರೆ, ನೀವು ಹಾಗೆ ನಡುವೆ ನಿಂತಿರೇಕೆ? ಬದಿಗೆ ದು ನಿಲ್ಲಿರಿ. ಈ ಕಾಡು ಮನುಷ್ಯರನ್ನು ಚೆಂಡಾಡಿ ಡುವಂತೆ ನಮ್ಮ ಸೈನಿಕರಿಗೆ ಆಜ್ಞೆ ಮಾಡುತ್ತೇನೆ. ದಿಗೆ ಸರಿಯಿರಿ!" ಎಂದನು.

ಜೀವದತ್ತನು ಆಟವಿಕರ ನಾಯಕನನ್ನು ಕುರಿತು "ಳಿದೆಯಾ? ಇನ್ನು ಕೆಲವೇ ಕ್ಷಣಗಳಲ್ಲಿ ನಿಮಗೆಲ್ಲಾ ವೋ ಬದುಕೋ ನಿಶ್ಚಯವಾಗಿ ಹೋಗುತ್ತದೆ" ದು ಹೇಳಿ ರಾಜನನ್ನು ನೋಡಿ, "ಮಹಾರಾಜಾ, ನ್ನೊಮ್ಮೆ ಚೆನ್ನಾಗಿ ಆಲೋಚನೆ ಮಾಡಿರಿ. ಆಟ ರು ಸೋತುಹೋದರೆ, ಸತ್ತುಳಿದವರು ಕಾಡಿ ಳಗಾದರೂ ಹೋಗಿ ಹಾಯಾಗಿ ಬದುಕುತ್ತಾರೆ. ದುವೇಳೆ ನೀವು ಸೋತರೆ ನಿಮ್ಮ ಸಿಂಹಾಸನವೇ ರಿ ಹೋಗುತ್ತದೆ. ನೀವು ತಪ್ಪಿಸಿಕೊಂಡರೆ ಡಿನಲ್ಲಿ ಕಾಡುಮನುಷ್ಯರಂತೆ ಬದುಕಬೇಕಾದೀತು!" ದು ಎಚ್ಚರಿಕೆ ಹೇಳಿದನು.

ಈ ಮಾತುಗಳನ್ನು ಕೇಳುವಾಗ ರಾಜನ ಮುಖವು ಪ್ಪಿಟ್ಟು ಹೋಯಿತು. ಆಗ ಮಂತ್ರಿ ದೊಡ್ಡ ದನಿ ಯಿಂದ ಎಲ್ಲರಿಗೂ ಕೇಳಿಸುವ ಹಾಗೆ "ಮಹಾ ಜರೆ, ಒಂದು ಸಂಗತಿ ನಿಮಗೆ ಹೇಳಿದ್ದೇನೋ ಲ್ಲವೋ? ನಿಮ್ಮ ತಂದೆಯವರು ಸಾಯುವ ದಲು ತಮ್ಮ ಕೊನೆಯ ಕೋರಿಕೆಯನ್ನು ನನ್ನ



ಹತ್ತಿರ ಹೇಳಿದ್ದಾರೆ. ಯಾವ ಪರಿಸ್ಥಿತಿಯಲ್ಲಾದರೂ ನಗರ ದ್ವಾರದ ಹೊರಗಡೆ ರಕ್ತಪಾತವಾಗಬಾರದೆಂದೂ, ಹಾಗೇನಾದರೂ ಆದರೆ ತನ್ನ ಆತ್ಮ ನರಳಾಡುವುದೆಂದೂ ಹೇಳಿದ್ದಾರೆ." ಎಂದನು.

"ಹೌದೌದು. ಆ ಸಂಗತಿ ಮರೆತೆ. ಸಮಯಕ್ಕೆ ನೆನಪು ಮಾಡಿದೆ ಮಹಾಮಂತ್ರೀ! ಇಲ್ಲದಿದ್ದರೆ ತಂದೆಯ ಕೊನೆಯ ಕೋರಿಕೆಗೆ ವಿಘ್ನ ತಂದು ಅವರ ಆತ್ಮವು ನರಳುವಂತೆ ಮಾಡಿ ಮಹಾಪಾಪಿಯಾಗುತ್ತಿದ್ದೆ. ತಂದೆಯ ಕೋರಿಕೆಯನ್ನು ನೆರವೇರಿಸಬೇಕಾದುದು ನನ್ನ ಧರ್ಮ. ಇದರಿಂದ ನನ್ನ ಕಾರ್ಯಕ್ಕೆ ಯಾವ ಕುಂದೂ ಬಾರದು. ಸರಿ, ಸೈನಿಕರೆಲ್ಲಾ ನಗರಕ್ಕೆ ಹಿಂದಿರುಗಿರಿ" ಎಂದು ನಿತ್ಯಾನಂದ ರಾಜನು ತಾನೇ ಮುಂದೆ ದ್ವಾರದ ಕಡೆಗೆ ನಡೆದನು.

"ಪುಕ್ಕಲು ರಾಜನಿಗೆ ತಕ್ಕ ಮಂತ್ರಿ! ಮರ್ಯಾದೆ ಉಳಿಸಲು ಸಮಯಕ್ಕೆ ತಕ್ಕ ನೆವನ ತೋರಿಸಿದ!" ಎನ್ನುತ್ತಾ ಖಡ್ಗವರ್ಮನು ಗಟ್ಟಿಯಾಗಿ ನಕ್ಕನು.



ಜೀವದತ್ತನೂ ಪ್ರತಿನಗೆಯೊಂದಿಗೆ ತಲೆ ದೂಗಿದನು. ಆಟವಿಕರ ನಾಯಕನು ಮುಂದೆ ಬಂದು, ಜೀವದತ್ತನೊಂದಿಗೆ, "ಅಯ್ಯಾ, ನನಗೆ ಅನುಮತಿ ಕೊಡಿರಿ. ಕೆಟ್ಟ ಮಾತುಗಳನ್ನಾಡುವ ಈ ರಾಜನನ್ನೂ ಅವನ ಸೈನಿಕರನ್ನೂ ಈಟಿಗಳ ಮೊನೆಗೆ ಚುಚ್ಚಿ ನಗರದ್ವಾರದ ಮುಂದೆ ನಿಲ್ಲಿಸಿಬಿಡುತ್ತೇವೆ. ನಮ್ಮ ಕೈಯಿಂದ ಕಪ್ಪೆಯು ಹಾಗೆ ಜಾರಿಹೋಗಲು ಸಾಧ್ಯವಿಲ್ಲ" ಎಂದನು.

"ಕ್ಷತ್ರಿಯ ಸಿಂಹಗಳೇ, ಅನುಮತಿ ಕೊಡಿರಿ. ಈ ರಾಜನು ಸತ್ತರೆ ಮಹಾವಿಘ್ನೇಶ್ವರನಿಗೂ ಬಹಳ ಸಂತೋಷವಾಗುತ್ತದೆ" ಎಂದ ವಿಘ್ನೇಶ್ವರ ಪೂಜಾರಿ ಉತ್ಸಾಹದಿಂದ.

"ಬಾಯಿ ಮುಚ್ಚು, ದುಷ್ಟ ಪೂಜಾರೀ! ನೀನು ಸತ್ತರೂ ವಿಘ್ನೇಶ್ವರ ದೇವರಿಗೆ ಸಂತೋಷವಾಗುತ್ತದೆ. ಈ ರಾಜನ ವಿಷಯವಾಗಿ ಏನು ಹೇಳಲಿಕ್ಕೂ ನಿನಗೆ ಹಕ್ಕಿಲ್ಲ. ಮೂರ್ಖ!" ಎಂದು ಖಡ್ಗವರ್ಮನು ಪೂಜಾರಿಯನ್ನು ಗದರಿಸಿ ನಗರದ್ವಾರದ ಕಡೆ ನೋಡಿದನು. ಪೂಜಾರಿ ಹೆದರಿ ಮುದುಡಿದ

ನಿತ್ಯಾನಂದ ರಾಜನು ತನ್ನ ಸೈನಿಕರೊಂದಿಗೆ ದ್ವಾರ ಹೊರಬದಿಯಲ್ಲಿ ನಿಂತುಕೊಂಡು, ಕೆಂಡ ಕಾರು ಕಣ್ಣುಗಳಿಂದ ಖಡ್ಗವರ್ಮ ಜೀವದತ್ತರ ಕಡೆ ನೋಡುತ್ತಿದ್ದನು. ಆ ನೋಟದಲ್ಲಿ ತನ್ನ ಸೈನಿ ರನ್ನೆಷ್ಟು ಆಹುತಿ ಕೊಡಬೇಕೆಂಬ ಆಶೆ ಕಾ ಯುತ್ತಿತ್ತು. ಆದುದರಿಂದ ಯಾವ ಕ್ಷಣದಲ್ಲಿ ದರೂ ಆ ಸೈನಿಕರು ತಮ್ಮ ಮೇಲೆ ಬೀಳಬ ದೆಂದು ಖಡ್ಗವರ್ಮ ಜೀವದತ್ತರಿಗೆ ತೋರಿತು.

"ಖಡ್ಗಾ, ಈ ರಾಜನಲ್ಲಿ ಅರ್ಧಭಾಗ ಪುಕ್ಕ ತನವೂ, ಉಳಿದರ್ಧಭಾಗ ಮೊಂಡುತನವೂ ಇರು ಹಾಗೆ ಕಾಣುತ್ತದೆ. ಸುಮ್ಮನೆ ರಕ್ತಪಾತವಾಗುವು ತಪ್ಪುವಂತೆ ಕಾಣುವುದಿಲ್ಲ" ಎಂದ ಜೀವದತ್ತ.

"ಸಮಾನವೀರರ ಗುಂಪುಗಳಿಂದಿರುವ ಇಬ್ಬ ಶತ್ರುಗಳ ನಡುವೆ ಹೋರಾಟವಾದರೆ ಅದು ವ್ಯರ್ಥ ರಕ್ತಪಾತವೆನಿಸಲಾರದು. ಅದು ಅಗತ್ಯವಾದ ರಕ್ತ ಪಾತವೇ. ಇಲ್ಲಿ ರಾಜಿಯಾಗಲು ಅವಕಾಶವಿರುವಂ ಕಾಣುವುದಿಲ್ಲ. ಧೈರ್ಯವಂತನೂ, ಬಲವಂತನೂ ಯುದ್ಧ ತಂತ್ರ ಬಲ್ಲವನೂ ಗೆಲ್ಲುತ್ತಾನೆ. ಅದೇನಿದ್ದರೂ ನಾನೀಗಲೇ ಸಂದೇಹವನ್ನು ಹಾರಿಸಿಬಿಡುತ್ತೇನೆ. ಯುದ್ಧವೋ ಶಾಂತಿಯೋ ಈಗಲೇ ಗೊತ್ತಾಗುತ್ತದೆ" ಎಂದು ಹೇಳಿ ಖಡ್ಗವರ್ಮನು, ಒಬ್ಬ ಆಟವಿಕ ಕೈಯಿಂದ ಈಟಿಯನ್ನು ತೆಗೆದುಕೊಂಡು ರಾಜ ಮುಂದೆ ಧಾವಿಸಿ ಹೋಗಿ ನಿಂತು, "ಎಲೋ. ನಿತ್ಯಾ ನಂದ ರಾಜಾ! ನಿನಗೆ ಆಟವಿಕರೊಂದಿಗೆ ಯುದ್ಧ ಮಾಡಲೇಬೇಕೆಂಬ ತುರಿಕೆ ಇದ್ದರೆ, ನಾನು ಈಟಿ ಯನ್ನೆತ್ತಿ ಒಂದು, ಎರಡು, ಮೂರು ಎಂದು ಹೇಳು ವುದರೊಳಗೆ, ನೀವು ನಗರದ್ವಾರವನ್ನಾದರೂ ಮುಚ್ಚ ಬೇಕು; ಅಥವಾ ಯುದ್ಧ ಮಾಡಲು ಮೈದಾನಕ್ಕಾ ದರೂ ಬರಬೇಕು-" ಎಂದು ಹೇಳಿ, ಬೆನ್ನಿಗೇ ಸಂ

ನ್ನು ಗಟ್ಟಿಯಾಗಿ ಉಚ್ಚರಿಸತೊಡಗಿದನು. ನು ಮೂರು ಎಂದು ಹೇಳುವುದರೊಳಗೆ ರದ ದ್ವಾರವು ಧಡಾಲ್ಲನೆ ಮುಚ್ಚಿಹೋಯಿತು. ನೂ ನಗರದೊಳಗೆ ಸೇರಿಹೋದನು.

ಆಟವಿಕರು ವಿಜಯ ಸೂಚಕವಾಗಿ ಹಾರಿ ದು ದೊಡ್ಡ ಘೋಷಣೆ ಮಾಡಿದರು. ವರ್ಮನು ತನ್ನ ಕೈಯಲ್ಲಿದ್ದ ಈಟಿಯನ್ನು ಚ್ಚಿದ ಬಾಗಿಲಿನ ಮೇಲೆ ಬಲವಾಗಿ ಬೀಸಿ ಒಗೆ ದು. ಅದು ದ್ವಾರವನ್ನು ಚುಚ್ಚಿ ನಡುಗಿಸಿತು.

“ಸರಿ. ರಾಜನಿಗೆ ಜ್ಞಾನೋದಯವಾಯಿತು. ನ್ನು ನಮ್ಮ ದಾರಿ ಹಿಡಿದು ನಾವು ಹೋಗೋಣ” ದ ಜೀವದತ್ತ.

ಅದರಿಬ್ಬರೂ ಮುಂದೆ ನಡೆಯಲು ಉಳಿದವ ಲ್ಲಾ ಅವರ ಹಿಂದೆ ಹೊರಟರು. ಸುಮಾರು ದು ಗಂಟೆ ಹೊತ್ತು ನಡೆದು ಅರಣ್ಯವನ್ನು ರಿಕೊಂಡರು.

ಅಲ್ಲಿ ಆಟವಿಕರು ಖಡ್ಗವರ್ಮ ಜೀವ ತ್ತರನ್ನು ಬಹಳವಾಗಿ ಗೌರವಿಸುತ್ತ ದೊಡ್ಡ ಔತಣ ಟವನ್ನು ನಡೆಸಿದರು. ಸ್ತ್ರೀಯರೂ ಪುರುಷರೂ ಡಿ ಅನೇಕ ಬಗೆಯ ಆಟಪಾಟಗಳಿಂದ ಅವರನ್ನು ತೋಷಪಡಿಸಿದರು. ಹೊತ್ತು ಹೋದುದೇ ಗೊತ್ತಾಗದಂತೆ ದಿನದ ಬಹುಭಾಗ ಹೀಗೆ ದು. ಕತ್ತಲೆಯಾಗಲು ಇನ್ನು ಸ್ವಲ್ಪ ಹೊತ್ತು ಉಳಿದಿದೆ ಎನ್ನುವಾಗ, ಖಡ್ಗವರ್ಮ ಜೀವದತ್ತರು ಆಟವಿಕರಿಗೆ ಹೇಳಿಕೊಂಡು, ತಮ್ಮ ಕಾರ್ಯಕ್ಕಾಗಿ ಲ್ಲಿಂದ ಹೊರಟರು.

ಅದುವರೆಗೂ ಅವರೊಂದಿಗೇ ಇದ್ದು ಪ್ರಾಣ ಯವಿಲ್ಲದೆ ಹೊತ್ತು ಕಳೆದ ವಿಘ್ನೇಶ್ವರ ಪೂಜಾ ಯೂ ಸ್ವರ್ಣಾಚಾರಿಯೂ ಖಡ್ಗವರ್ಮ ಜೀವ ತ್ತರು, ತಮ್ಮ ಗೊಡವೆ ಬಿಟ್ಟವರ ಹಾಗೆ ಹೊರಟು ನ್ನು ನೋಡಿ ತಬ್ಬಿಬ್ಬಾದರು. ಅವರ ಕಣ್ಣು ತಪ್ಪಿದ



ಕೂಡಲೇ, ಆಟವಿಕರು ತಮ್ಮನ್ನು ಚೂರು ಚೂರು ಮಾಡುವರೆಂದು ಹೆದರಿ, ಖಡ್ಗವರ್ಮ ಜೀವದತ್ತರ ಹಿಂದೆಯೇ ಹೊರಟರು. ಅವರನ್ನು ಸಮೀಪಿಸಿ, “ಅಯ್ಯಾ, ನಮ್ಮನ್ನು ಇಲ್ಲಿ ಬಿಟ್ಟು ಹೋಗುವಿರಾ? ಈ ಆಟವಿಕರು ನಮ್ಮನ್ನು ಹಿಡಿದು ಚೂರು ಚೂರು ಮಾಡುತ್ತಾರೆ!” ಎಂದು ಗೋಳಿಟ್ಟರು.

“ಇವರಿಬ್ಬರನ್ನು ಏನುಮಾಡೋಣ ಖಡ್ಗಾ?” ಎಂದು ಜೀವದತ್ತನು ಕೇಳಲು, “ಇವರನ್ನು ಏನು ಮಾಡಬೇಕೆಂದು ಆಟವಿಕರ ಕಿವಿಗೆ ಬೀಳುವ ಹಾಗೆ ಹೇಳಬಾರದು. ಮುಂದೆ ಕಾಣುವ ಆ ಗುಡ್ಡದವರೆಗೆ ಇವರು ನಮ್ಮೊಂದಿಗೇ ಬರಲಿ. ಅಲ್ಲಿಗೆ ಹೋಗಿ ಆಲೋಚನೆ ಮಾಡೋಣ. ವಿಂಧ್ಯಪರ್ವತದವರೆಗೂ ಈ ಕಾಡು ಬೆಕ್ಕುಗಳನ್ನು ಕರೆದುಕೊಂಡು ಹೋಗಲು ಸಾಧ್ಯವಿಲ್ಲವೆ?” ಎಂದ ಖಡ್ಗವರ್ಮ.

“ನಾವು ಕಾಡು ಬೆಕ್ಕುಗಳಾಗಿದ್ದರಾದರೂ ಕಾಡಿನೊಳಗಿರುವ ಮೊಲಗಳನ್ನೋ, ಕೋಳಿಗಳನ್ನೋ




ಹಿಡಿದು ತಿಂದು ಸುಖವಾಗಿ ಇರುತ್ತಿದ್ದೆವು. ಮನುಷ್ಯರಾದುದರಿಂದಲೇ ಇಷ್ಟೊಂದು ಕಷ್ಟಕ್ಕೆ ಸಿಕ್ಕಿದೆವು. ಆ ಮಹಾವಿಘ್ನೇಶ್ವರನು ಕನಸಿನಲ್ಲಿ ಕಾಣಿಸಿ ನನ್ನನ್ನು ನಡುಸಮುದ್ರದಲ್ಲಿ ಕೈಬಿಟ್ಟ!" ಎಂದು ವಿಘ್ನೇಶ್ವರ ಪೂಜಾರಿ ಚಡಪಡಿಸಿದನು.

"ದೇವರೇ ಕೈಬಿಟ್ಟ ಮೇಲೆ ನಮ್ಮಗತಿ ಹೇಗಾಗುವುದೋ !" ಎಂದು ಸ್ವರ್ಣಾಚಾರಿ ಗೋಗರೆದ.

ಈಗಲಾದರೂ ಎಚ್ಚರಕ್ಕೆ ಬಂದಿರಲ್ಲ. ಬುದ್ಧಿಯುಳ್ಳ ಮನುಷ್ಯರುತಾನೆ? ಕಾಡು ಬೆಕ್ಕುಗಳ ಹಾಗೆ ಬದುಕಿಕೊಂಡಿರಲು ಸಾಧ್ಯವಿದೆ. ಅಥವಾ ಇನ್ನೊಂದು ರಕ್ಕಸಾನೆಯನ್ನು ತಯಾರು ಮಾಡಿ ಯಾವರಾಜ್ಯದ ಮೇಲಾದರೂ ದಂಡೆತ್ತಿರಿ. ಹೇಗೂ ಒಬ್ಬರಿಗೊಬ್ಬರು ಸಹಾಯಕರಾಗಿದ್ದೀರಲ್ಲ?" ಎಂದು ಹೇಳಿ ಖಡ್ಗವರ್ಮ ನಕ್ಕನು.

"ಸರಿ. ಪ್ರಸ್ತುತ ನಮ್ಮ ಹಿಂದೆ ಬನ್ನಿ. ಯೋಚನೆ ಮಾಡೋಣ" ಎಂದ ಜೀವದತ್ತ.

ನಾಲ್ವರೂ ಉತ್ತರ ದಿಕ್ಕನ್ನು ಹಿಡಿದು ನಡೆಯುತ್ತ ಹೊತ್ತು ಮುಳುಗುವಷ್ಟರಲ್ಲಿ ಗುಡ್ಡದ ಪ್ರದೇಶವನ್ನು ತಲಪಿದರು. ಆ ರಾತ್ರಿಯಲ್ಲಿ ಅಲ್ಲಿಯೇ ಒಂದು ಮರದ ಬುಡದಲ್ಲಿ ಅಡಿಗೆ ಮಾಡಿಕೊಂಡು ತಿಂದು ಮರಗಳ ಮೇಲೆ ಹತ್ತಿ ಕೊಂಬೆಗೆ ತಮ್ಮನ್ನು ಬಿಗಿದು ಮಲಗಿಕೊಂಡರು.

ಮರುದಿನ ಬೆಳಗಾದ ಮೇಲೆ ಅಲ್ಲಿಂದ ಮುಂದೆ ಪ್ರಯಾಣ ಹೊರಟಾಗ ಪೂಜಾರೀ ಸ್ವರ್ಣಾಚಾರಿ ಕೂಡಾ ಅವರ ಹಿಂದೆಯೇ ಹೊರಟರು.

"ಹೀಗೆ ನಮ್ಮ ಹಿಂದೆ ಎಷ್ಟುದೂರ ಬರುವಿರಿ? ನಾವು ವಿಂಧ್ಯಪರ್ವತಗಳ ಕಡೆಗೆ ಹೋಗುತ್ತಿದ್ದೇವೆ. ಮಾರ್ಗದಲ್ಲಿ ಅಡ್ಡಬರುವ ಪ್ರಮಾದಗಳಿಂದ ನಮ್ಮನ್ನು ನಾವು ಕಾಪಾಡಿಕೊಳ್ಳುವುದೇ ಕಷ್ಟವಾಗಿರುವಾಗ, ನಿಮ್ಮ ಬಾಧ್ಯತೆ ಬೇರೆ ನಾವು ಹೊತ್ತುಕೊಳ್ಳಬೇಕೆ?" ಎಂದ ಜೀವದತ್ತ.

"ನಮ್ಮ ವಿಧಿ ಹೀಗಿದೆ. ನಾವಾಗಿ ಯಾವುದಕ್ಕೂ ಹೋಗದಿದ್ದರೂ ಅದಾಗಿಯೇ ನಮ್ಮ ಮೇಲೆ ಬರುತ್ತಾ ಇದೆ" ಎಂದ ಖಡ್ಗವರ್ಮ.

"ಅಯ್ಯಾ, ನಾವು ನಿಮ್ಮೊಂದಿಗೆ ಬರುತ್ತ. ದಾರಿಯಲ್ಲಿ ಯಾವುದಾದರೂ ಹಳ್ಳಿಯೋ ಪಟ್ಟಣವೋ ಸಿಕ್ಕಿದರೆ ಅಲ್ಲಿಯೇ ಇದ್ದು ಬಿಡುತ್ತೇವೆ. ಈ ಅರಣ್ಯ ಮಧ್ಯದಲ್ಲಿ ನಮ್ಮನ್ನು ಬಿಟ್ಟರೆ ಹಗೆ ತೊಟ್ಟ ಆಟವಿಕರು ನಮ್ಮನ್ನು ಬೇಟೆಯಾಡಿ ಬಿಡುತ್ತಾರೆ" ಎಂದ ವಿಘ್ನೇಶ್ವರ ಪೂಜಾರಿ.

ಅವರಿಬ್ಬರ ಭೀತಿಯನ್ನು ನೋಡಿ, ಖಡ್ಗವರ್ಮ ಜೀವದತ್ತರಿಗೆ ಕನಿಕರವುಂಟಾಯಿತು. ಅವರಿಬ್ಬರನ್ನೂ ತಮ್ಮೊಂದಿಗೆ ಬರಲು ಅನುಮತಿ ಕೊಟ್ಟು, ಮುಂದೆ ಸಾಗಿದರು. ಆ ಮೇಲೆ ಯಾವ ಅಡೆತಡೆಗಳೂ ಇಲ್ಲದಂತೆ ಕಾಡು ದಾರಿಯಲ್ಲಿ ಅವರ ಪ್ರಯಾಣ ಸಾಗಿತು. ಮೂರನೇದಿನ ಬೆಳಿಗ್ಗೆ, ಮರದ ಮೇಲೆ ಮಲಗಿದ್ದ ಖಡ್ಗವರ್ಮ ಜೀವದತ್ತರ ಕಿವಿಗಳ

ವಿಚಿತ್ರವಾದ ಶಬ್ದಗಳು ಕೇಳಿ ಎಚ್ಚರ ಗೊಳಿಸಿದುವು, ತುಸು ದೂರದಿಂದ ಮನುಷ್ಯನೊಬ್ಬನ ಕೂಗಾಟವೂ, ಹುಲಿಯ ಗರ್ಜನೆಯೂ ಹೊರಡುತ್ತಿದ್ದುವು.

ಆ ಶಬ್ದದಿಂದ ಖಡ್ಗವರ್ಮ ಜೀವದತ್ತರು ಚಟಕ್ಕನೆ ಎದ್ದು ಸರಿಯಾಗಿ ಕುಳಿತರು. ವಿಘ್ನೇಶ್ವರ ಪೂಜಾರಿಯೂ, ಸ್ವರ್ಣಾಚಾರಿಯೂ ಆ ಕರ್ಕಶ ಶಬ್ದ ದಿಂದ ಗಡಗಡ ನಡುಗುತ್ತ ಕೊಂಬೆಗಳನ್ನು ಬಿಗಿ ಯಾಗಿ ಅಪ್ಪಿಕೊಂಡಿದ್ದರು.

ತುಸು ದೂರದಲ್ಲಿ ಕೂಗಾಡುವ ಆ ಮನುಷ್ಯ ನನ್ನು ನೋಡಿ ಖಡ್ಗವರ್ಮನು "ಇದೇನು—ಆ ಮನುಷ್ಯನ ಬುದ್ಧಿ ಕೆಟ್ಟಿದೆಯೋ ? ಎರಡು ಹುಲಿ ಮರಿಗಳನ್ನು ಕಂಕುಳಲ್ಲಿಟ್ಟುಕೊಂಡು ಕೂಗಿ ಎಗ ರಾಡುತ್ತಾನೇಕೋ ? ಅವನ ಕೂಗು ಹುಲಿಗೂ ಕೇಳಿಸಿದೆ. ಇಲ್ಲದಿದ್ದರೆ ಹುಲಿ ಹಾಗೆ ಗರ್ಜಿಸುತ್ತ ದೆಯೆ ? ಇದೆಂಥ ವಿಚಿತ್ರ ಆಟ !" ಎಂದನು.

ಜೀವದತ್ತನು ಸಮೀಪದಲ್ಲಿದ್ದ ಒಂದು ಮರದ ಕಡೆಗೆ ನೋಡಿದನು. ಹರಕುಬರಕು ದುಸ್ತಿನಲ್ಲಿ ಧೂಳು ಬಡಿದುಕೊಂಡಿದ್ದ ಯುವಕನೊಬ್ಬ ಎರಡು ಹುಲಿ ಮರಿಗಳನ್ನು ಎತ್ತಿಕೊಂಡು ಕುಣಿಯುತ್ತ, "ಹುಲಿಯವ್ವಾ ! ವ್ಯಾಘ್ರರಾಣೀ ! ಬಾ ! ಬಾ !" ಎಂದು ಕೂಗುತ್ತಿದ್ದನು.

"ಎಂಥ ಹುಚ್ಚನಿವ ! ಇನ್ನು ಇವನು ಬದುಕುವು ದುಂಟೆ ? ಆದರೂ ಅವನು ಬದುಕಿರುವವರೆಗೆ ನಾವು ಅವನನ್ನು ರಕ್ಷಿಸಬೇಕು. ಏನು ಅವನ ಕಥೆಯೋ ತಿಳಿದುಕೊಳ್ಳಬೇಕು" ಎನುತ್ತ ಜೀವದತ್ತನು ಮರದ ಮೇಲಿನಿಂದ ಇಳಿಯ ತೊಡಗಿದನು.

ಅವನ ಸಮೀಪದಲ್ಲೇ ಹುಲಿಯ ಗರ್ಜನೆ ಕೇಳ ತೊಡಗಿತು. ಕೂಡಲೇ ಖಡ್ಗವರ್ಮನು ಹುಲಿ ಅವನ ಮೇಲೆ ಹಾರುವುದೆಂದುಕೊಂಡು, "ಹೊ ! ಅವನು ಸತ್ತಹಾಗೇ ಸರಿ !" ಎನ್ನುತ್ತ ಮರದಿಂದ ಒಮ್ಮೆಗೇ ಧುಮುಕಿ ಆ ಯುವಕನ ಕಡೆಗೆ ಓಡಿದನು.




"ಜಾಗ್ರತೆಯಪ್ಪಾ ಖಡ್ಗಾ, ಮರಿಗಳ ತಾಯಿಯನ್ನು ಸಾಧ್ಯವಾದಷ್ಟು ಉಳಿಸಲು ನೋಡು !" ಎನ್ನುತ್ತ ಜೀವದತ್ತನೂ ಖಡ್ಗವರ್ಮನ ಹಿಂದೆಯೇ ಆ ಯುವಕನಬಳಿಗೆ ಓಡಿದನು.

ಹುಲಿಗೆ ಕೂಡಾ ನಿರಾಯುಧನಾದ ಮನುಷ್ಯನ ಮೇಲೆ ಹಾರುವುದೇ ಬಿಡುವುದೇ ಎಂಬ ಸಂದೇಹ ಎದ್ದಿರಬೇಕು. ಏಕಾಂಗಿಯಾದ ಮನುಷ್ಯ ನಿರಾಯುಧ ನಾಗಿ ತನ್ನ ಮರಿಗಳನ್ನೆತ್ತಿಕೊಂಡು ಕುಣಿಯುವುದನ್ನು ನೋಡಿ ಅದಕ್ಕೆ ಆಶ್ಚರ್ಯವಾಗಿರಲೂ ಬಹುದು. ಭಯಪಟ್ಟಿರಲೂ ಬಹುದು. ಅಂತೆಯೇ ಅದು ಕೆಲವು ಕ್ಷಣ ಸುಮ್ಮನಿರಲು, ಜೀವದತ್ತನು ಅದರ ಹತ್ತಿರ ಹೋದನು. ಆಗ ಹುಲಿ ಮರಿಗಳು ಭುಸು ಗುಟ್ಟುತ್ತ ಒದರಾಡ ತೊಡಗಿದುವು.

ತನ್ನ ಮರಿಗಳ ಅವಸ್ಥೆಯನ್ನು ನೋಡಿ ಹುಲಿ ದೊಡ್ಡದಾಗಿ ಬಾಯಿ ತೆರೆದು ಯುವಕನ ಮೇಲೆ ಹಾರಿತು. ಆಗ ಜೀವದತ್ತನು ತನ್ನ ದಂಡವನ್ನು

ಅದರ ಭುಜ ಪ್ರದೇಶಕ್ಕೆ ಬೀಸಿ ಹೊಡೆದನು. ಆ ಏಟಿಗೆ ಹುಲಿ ಹಿಮ್ಮೆಗುಚಿ, ಬಿಸುಟ ಹಾಗೆ ಅಷ್ಟು ದೂರ ಹೊರಳಿಬಿತ್ತು.

"ಖಡ್ಗಾ, ಹುಲಿಗೆ ಬೋದ ತಪ್ಪಿಹೋಯಿತು. ಅದು ಮತ್ತೆ ಏಳುವುದರೊಳಗೆ ಯಾವುದೋ ಒಂದು ಬಳ್ಳಿಯಿಂದ ಉಪಾಯವಾಗಿ ಉರುಳು ಹಾಕಿ ಅದನ್ನೊಂದು ಮರಕ್ಕೆ ಕಟ್ಟು" ಎಂದನು.

ಕೂಡಲೇ ಖಡ್ಗವರ್ಮನು ಕೊಂಬೆಗೆ ನೇತಾಡುತ್ತಿದ್ದ ಒಂದು ಬಳ್ಳಿಯನ್ನು ಕಡಿದು ಒಂದು ಕೊನೆಗೆ ಉರುಳು ಹಾಕಿ ಹುಲಿಯ ಕೊರಳಿಗೆ ಸಿಕ್ಕಿಸಿ, ಎರಡನೆಯ ಕೊನೆಯನ್ನು ಮರಕ್ಕೆ ಕಟ್ಟಿದನು.

"ಅಯ್ಯೋ, ಯಾರಪ್ಪ ನೀವು? ಎಂಥಾ ಅನ್ಯಾಯ ಮಾಡಿದಿರಿ! ಈ ಹುಲಿಯಿಂದ ನನ್ನನ್ನು ರಕ್ಷಿಸಿ, ಇದಕ್ಕಿಂತ ಭಯಂಕರವಾದ ಸಾವಿಗೆ ನನ್ನನ್ನು ದೂಡುವಿರಲ್ಲಾ!" ಎಂದು ಕೂಗಿದ ಆ ಯುವಕ.

"ಸಾಯಲೇ ಬೇಕಾದರೆ ಎಷ್ಟು ದಾರಿಗಳಿಲ್ಲ! ಮರದಕೊಂಬೆಗೆ ಉರುಳು ಹಾಕಿಕೊಳ್ಳಬಾರದೆ? ಎಲ್ಲಾದರೂ ಬಾವಿಗೆ ಹಾರಬಾರದೆ?" ಎಂದ ಖಡ್ಗವರ್ಮ ಕೋಪದಿಂದ.

"ಆತ್ಮಹತ್ಯೆ ಮಹಾ ಪಾಪವೆಂದು ಹಿರಿಯರು ಹೇಳುತ್ತಾರೆ. ಅದಕ್ಕಾಗಿ ಈ ಹುಲಿಗೆ ಆಹಾರವಾಗಿ..." ಎಂದು ಯುವಕನು ಹೇಳುವಾಗ ಖಡ್ಗವರ್ಮನು ನಡುವೇ ತಡೆದು, "ಈಗ ನೀನು ಮಾಡಲಿರುವುದುಮಾತ್ರ ಆತ್ಮಹತ್ಯವಲ್ಲವೆಂದು ಹಿರಿಯರು ಹೇಳಿದ್ದಾರೆಯೆ? ಯಾರು ನೀನು? ಏನಾಯಿತು? ನಿಜ ಹೇಳು. ಹುಚ್ಚನೊ? ಸರಿಯಾದವನೋ?" ಎಂದು ಕೇಳಿದನು.

"ಹಾಗೆಲ್ಲ ಕೇಳಬೇಡ ಖಡ್ಗಾ. ಪಾಪ, ಏನೋ ನೊಂದವನಿರಬೇಕು. ನೀನು ಸುಮ್ಮನಿರು" ಎಂದು ಜೀವದತ್ತನು ಆ ಯುವಕನನ್ನು ಕುರಿತು, "ನಿನಗೆ ಬಂದಿರುವ ಕಷ್ಟವೇನಪ್ಪ? ಹುಲಿ ಕುತ್ತಿಗೆ ಸೀಳಿ ಕೊಲ್ಲುವುದಕ್ಕಿಂತಲೂ ಭಯಂಕರವಾದ ಸಾವು ಯಾವ ರೀತಿಯಾಗಿ ಯಾರಿಂದ ನಿನಗೆ ಬರುತ್ತದೆ?" ಎಂದು ಕೇಳಿದ.

ಯುವಕನು ಭೀತಿಯಿಂದ ನಡುಗುತ್ತ ನಾಲ್ಕು ಸುತ್ತಲೂ ತಲೆ ತಿರುಗಿಸಿ ನೋಡಿ ಏನೋ ಹೇಳಲು ಪ್ರಯತ್ನಿಸಿದನು. ಅಷ್ಟರಲ್ಲಿ ಮರಗಳ ಹಿಂದಿನಿಂದ ಖಡ್ಗ ಮೃಗದ ಮೇಲೆ ಕುಳಿತಿದ್ದವನೊಬ್ಬ ಮುಂದೆ ಬಂದು, "ಅರಣ್ಯಪುರದ ಗಣಾಚಾರಿಯ ಕೈಯಲ್ಲಿ ಇವನು ಭಯಂಕರ ರೀತಿಯಲ್ಲಿ ಸಾಯುತ್ತಾನೆ!" ಎಂದು ಹೇಳಿ, "ಯಾರಲ್ಲಿ? ಬನ್ನಿರಿ! ಇವರಾರೂ ಓಡಿ ಹೋಗದಂತೆ ಸುತ್ತಲೂ ಮುತ್ತಿರಿ!" ಎಂದು ಕೂಗಿ ಹೇಳಿದನು.

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)





# ಸೌಂದರ್ಯದಾನ

ಹಟದ ಮೂರ್ತಿಯಂತಹ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಕ್ಕಿಳಿಸಿ, ಭುಜದ ಮೇಲೆ ಹಾಕಿಕೊಂಡು, ಎಂದಿನಂತೆ ಮೌನದಿಂದ ಶ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಆವೇಶಿತವಾಗಿದ್ದ ಬೇತಾಳವು ಮಾತಾಡಲು ತೊಡಗಿ, "ರಾಜಾ, ನೀನು ಬಹಳ ಕಷ್ಟಪಟ್ಟು ಯಾವುದನ್ನು ಸಾಧಿಸಬೇಕೆಂದಿರುವಿಯೋ ಅದನ್ನು ಇನ್ನೊಬ್ಬನು ಸುಲಭವಾಗಿ ಸಾಧಿಸಿಬಿಟ್ಟನಾದರೆ, ಜಯಂತನ ಹಾಗೆಯೇ ನಿನಗೆ ಕೂಡಾ ಆಶಾಭಂಗವಾದೀತಲ್ಲವೆ ? ನಿನಗೆ ದಾರಿಯ ಶ್ರಮ ತಿಳಿಯದಂತೆ ಆ ಜಯಂತನ ವಿಚಿತ್ರ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಹೇಳಲು ತೊಡಗಿತು:

ಅನೇಕ ವರ್ಷಗಳ ಹಿಂದೆ ಆರಾವಳೀ ಪರ್ವತ ಪ್ರಾಂತದಲ್ಲಿ ಅಲಕಾಪುರಿ ಎಂಬ ರಾಜ್ಯವಿತ್ತು. ಅದನ್ನು ಚಿತ್ರಸೇನನೆಂಬ ಮಹಾರಾಜನು ಪಾಲಿಸಿಕೊಂಡಿದ್ದನು. ಅವನು ತನ್ನ ರಾಜ್ಯದ ಸುತ್ತಮುತ್ತಲಿರುವ ಅನೇಕ ಮಂದಿ ರಾಜರುಗಳಿಗೆ ಕೂಡಾ ನಾಯಕತ್ವ ವಹಿಸಿಕೊಂಡು, ಎಲ್ಲಾ ದೇಶಗಳಿಗೂ

ಬೇತಾಳಕಥೆಗಳು



ಕ್ಷೇಮವೂ ಸಮೃದ್ಧಿಯೂ ಉಂಟಾಗುವ ಹಾಗೆ ನೋಡಿಕೊಳ್ಳುತ್ತಿದ್ದನು.

ಚಿತ್ರಸೇನ ಮಹಾರಾಜನಿಗೆ ಬಹಳ ಅಪೂರ್ವವೆನಿಸುವಷ್ಟು ಸೌಂದರ್ಯದಿಂದ ಕೂಡಿದ ಕುಮಾರಿಯೊಬ್ಬಳು ಇದ್ದಳು. ಅಂತೆಯೇ ಅವಳಿಗೆ ಜಗನ್ಮೋಹಿನಿ ಎಂಬ ಹೆಸರು ಬಂದಿತ್ತು. ಅವಳನ್ನು ಮದುವೆಯಾಗಬೇಕೆಂದು ಅನೇಕ ಮಂದಿ ರಾಜಕುಮಾರರು ಅತ್ಯಾಶೆಯಿಂದ ಕಾದುಕೊಂಡಿದ್ದರು. ಆದರೆ ಜಗನ್ಮೋಹಿನಿ ತನ್ನಿಚ್ಛೆಯಂತೆ ಮದುವೆಯಾಗುವ ಅವಕಾಶವನ್ನು ಒದಗಿಸಲಿಕ್ಕಾಗಿ ರಾಜನು ಸ್ವಯಂವರವನ್ನು ಪ್ರಕಟಪಡಿಸಿ, ನಾನಾ ದೇಶಗಳ ಅಧಿಪತಿಗಳಿಗೆ ಆಹ್ವಾನಗಳನ್ನು ಕಳುಹಿಸಿದನು.

ಅದರಂತೆ ಅವಳ ಮೇಲಿನ ಆಶೆಯಿಂದ ಅನೇಕ ಮಂದಿ ರಾಜಕುಮಾರರೂ ಒಬ್ಬರಿಗಿಂತ ಒಬ್ಬರು ಹೆಚ್ಚು ವೈಭವದಿಂದ ಬರಲಾರಂಭಿಸಿದರು. ನಾಳೆ ಸ್ವಯಂವರವೆನ್ನುವಾಗ, ಜಗನ್ಮೋಹಿನಿ ತನ್ನ ಸಖಿಯರೊಂದಿಗೆ ವನವಿಹಾರಕ್ಕೆ ಹೋಗಿ ಒಂದು ಸರೋವರವನ್ನು ನೋಡಿದಳು. ಬಹಳ ಅಂದವಾಗಿ ತೋರುವ ಆ ಸರೋವರದಲ್ಲಿ ಸ್ನಾನ ಮಾಡಬೇಕೆಂದು ಜಗನ್ಮೋಹಿನಿಗೆ ತೋರಿತು. ಮನೆಯಿಂದ ಬಹಳ ದೂರ ಬಂದಿದ್ದೇವೆಂದೂ, ಕತ್ತಲೆ ಬೀಳುವುದರೊಳಗೆ ಮನೆಗೆ ಹಿಂದಿರುಗಬೇಕೆಂದೂ ಸಖಿಯರು ಹೇಳಿದರು. ಅವರ ಮಾತನ್ನು ಕೇಳದೆ ಜಗನ್ಮೋಹಿನಿ ಸರೋವರದಲ್ಲಿ ಇಳಿದು ಮೂರು ಸಾರಿ ಮುಳುಗಿ ಎದ್ದಳು.

ಅಷ್ಟರಲ್ಲಿ ಅವಳನ್ನು ನೋಡಿ ಸಖಿಯರೆಲ್ಲ ಕೆಟ್ಟ ಸ್ವರದಿಂದ ಕೂಗುತ್ತ ಆರ್ತನಾದ ಮಾಡತೊಡಗಿದರು. ಅದನ್ನು ಕೇಳಿ ಜಗನ್ಮೋಹಿನಿ ಗಾಬರಿಯಾಗಿ ಮೇಲೆ ಬಂದಳು. ಏಕೆ ಅವರೆಲ್ಲ ಹಾಗೆ ಕೂಗಿದರೆಂಬುದು ಅವಳಿಗೆ ತಿಳಿಯಲಿಲ್ಲ.

ಆಗ ತನ್ನನ್ನು ತಾನು ನೋಡಿದ ಕೂಡಲೇ ಅವಳ ಬುದ್ಧಿಗೆ ಕತ್ತಲು ಕವಿಯಿತು. ಬಂಗಾರದ ಬಣ್ಣದಿಂದ ಕಂಗೊಳಿಸುತ್ತಿದ್ದ ಅವಳ ಶರೀರಕ್ಕೆ ಕಬ್ಬಿಣದ ಬಣ್ಣವು ಬಂದುಬಿಟ್ಟಿತ್ತು. ಚರ್ಮ ಮೊರಟಾಗಿ ಬಿಟ್ಟಿತ್ತು. ಅವಳ ಮುಖದಲ್ಲಿ ಕಳೆಯೂ ಇಲ್ಲ, ಕಾಂತಿಯೂ ಇಲ್ಲ. ಈ ವಿಪರೀತವನ್ನು ನೋಡಿ ಅಳುತ್ತಿರುವ ಸಖಿಯರೊಂದಿಗೆ ತಾನೂ ಅಳುತ್ತ ಜಗನ್ಮೋಹಿನಿ ಮನೆಗೆ ಬಂದು ಸೇರಿದಳು.

ಅವಳಲ್ಲಿ ಉಂಟಾದ ಬದಲಾವಣೆಯನ್ನು ನೋಡಿ ಅವಳ ತಂದೆ ತಾಯಿಯರು ಹತಾಶರಾಗಿ ಹೋದರು. ನಾಳೆಯೇ ಸ್ವಯಂವರವೆಂದಿರುವಾಗ ಅವರಿಗೆ ದಿಕ್ಕು ತೋರಲಿಲ್ಲ. ಜಗನ್ಮೋಹಿನಿಯನ್ನು ಮದುವೆಯಾಗುವ ಆಶೆಯಿಂದ ಅನೇಕ ಮಂದಿ ರಾಜಕುಮಾರರು ಬಂದಿದ್ದಾರೆ, ಅವರಿಗೆ ತನ್ನ ಈ ಮಗಳನ್ನು ಹೇಗೆ ತೋರಿಸುವುದು ? ತೋರಿಸಿದರೂ ಸ್ವಯಂವರ ನಡೆಸುವುದು ಹೇಗೆ ? ಒಂದೂ ತೋರದೆ ರಾಜನು ಮಂತ್ರಿಯೊಂದಿಗೆ ನಡೆದ ಸಂಗತಿಯನ್ನು

ಳಿ, ಮುಂದಿನ ಕರ್ತವ್ಯವೇನೆಂದು ಕೇಳಿದನು. ಮಂತ್ರಿ ರಾಜವೈದ್ಯರನ್ನು ಕರೆಯಿಸಿ, ರಾಜಕುಮಾರಿಗೆ ಚಿಕಿತ್ಸೆ ಏನಾದರೂ ಮಾಡಲು ಸಾಧ್ಯವೇ ಎಂದು ಪರೀಕ್ಷಿಸಲು ಹೇಳಿದನು.

"ರೋಗಿಗಳಿಗೆ ಚಿಕಿತ್ಸೆ ಮಾಡಬಹುದು. ಆದರೆ ಇದು ರೋಗವಲ್ಲ. ಏನೋ ಶಾಪದಂತೆ ಕಾಣುತ್ತದೆ" ಎಂದರು ವೈದ್ಯರು. ಆಗ ಒಬ್ಬ ಘನವೈದ್ಯ ಬಹಳ ಆಲೋಚನೆ ಮಾಡಿ, "ಮಹಾರಾಜರೆ, ಇದು ಒಂದು ವ್ಯಾಧಿ ಎಂಬುದೇ ನನ್ನ ನಂಬುಗೆ. ಆದರೆ ಇದಕ್ಕೆ ಸಾಧಾರಣ ಚಿಕಿತ್ಸೆ ಏನೆಂಬುದು ಗೊತ್ತಾಗುವುದಿಲ್ಲ. ಆದರೆ ಎಲ್ಲಾ ಬಗೆಯ ಶರೀರ ಜಾಡ್ಯಗಳಿಗೂ ವಜ್ರಾಯುಧದಂತಹ ಪರಿಹಾರ ಕ್ರಮವು ಪ್ರಾಚೀನ ಗ್ರಂಥಗಳಲ್ಲಿವೆ. ಅದೇನೆಂದರೆ ಪಂಚವರ್ಣವೆಂಬ ಸರೋವರದ ನೀರು. ಆ ಸರೋವರವು ಎಲ್ಲಿದೆಯೋ ನನಗೆ ತಿಳಿಯದು. ಅದರ ಚಿಕಿತ್ಸೆ ಕೂಡಾ ನನಗೆ ತಿಳಿದ ಮಟ್ಟಿಗೆ ಯಾರಿಗೂ ನಡೆದುದು ಗೊತ್ತಿಲ್ಲ. ಇದು ಶಾಪವಾದರೂ ರೋಗವಾದರೂ, ಅದು ಬಂದರೆ ರಾಜಕುಮಾರಿ ಮೊದಲಿನಂತಾಗುವಳು." ಎಂದನು.

ಮರುದಿನ ಸ್ವಯಂವರಕ್ಕೆ ನಿರ್ಣಯಿಸಿದ ವೇಳೆಗೆ ಮೊದಲೇ ನಾನಾ ದೇಶದ ರಾಜಕುಮಾರರು ಸಭೆಯಲ್ಲಿ ಕುಳಿತುಕೊಂಡು ಜಗನ್ಮೋಹಿನಿಯ ಬರುವಿಕೆಯನ್ನು ಆತುರದಿಂದ ಇದಿರು ನೋಡಿಕೊಂಡಿದ್ದರು.

ಮಂತ್ರಿ ಅವರೆಲ್ಲರಿಗೂ ಹಿಂದಿನದಿನ ನಡೆದ ದುಸ್ಸಂಘಟನೆಯನ್ನು ಕುರಿತು ಹೇಳಿ, "ಈಗ ಇರುವ ಸ್ಥಿತಿಯಲ್ಲಿ ರಾಜಕುಮಾರಿಯನ್ನು ಯಾರೂ ಮದುವೆಯಾಗಲು ಇಷ್ಟಪಡಲಾರರು. ಆದರೆ ಅವಳು ಮೊದಲಿನಂತೆ ಆಗಲು ಒಂದೇ ದಾರಿ ಇರುವಂತೆ ಗೊತ್ತಾಗಿದೆ. ಎಲ್ಲಿಯೋ ಪಂಚವರ್ಣ ಸಂಜೀವಿನಿ ಸರೋವರ ಇದೆಯಂತೆ. ಅದರ ನೀರನ್ನು ಕುಡಿದರೆ ರಾಜಕುಮಾರಿಗೆ ಮೊದಲಿನ ರೂಪವು ಬಂದುಬಿಡುತ್ತದೆ. ನಿಮ್ಮಲ್ಲಿ ಯಾರಾದರೂ ಅಂತಹ ನೀರನ್ನು



ತಂದು ರಾಜಕುಮಾರಿಗೆ ಬಂದಿರುವ ವಿಕಾರವನ್ನು ಹೋಗಲಾಡಿಸಲು ಸಾಧ್ಯವಾದರೆ, ನಮ್ಮ ಮಹಾರಾಜರು ತಮ್ಮ ಮಗಳನ್ನು ಮಾತ್ರವಲ್ಲದೆ ರಾಜ್ಯವನ್ನೂ ಸಹ ಕೊಡುವರು" ಎಂದನು.

ಈ ಮಾತು ಕೇಳಿದ ಮೇಲೆ, ಇಬ್ಬರ ಹೊರತು ಉಳಿದ ರಾಜಕುಮಾರರೆಲ್ಲಾ ಎದ್ದು ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು. ಉಳಿದಿರುವ ಇಬ್ಬರಲ್ಲಿ ಮಾಳವದೇಶದ ಯುವರಾಜನಾದ ಜಯಂತನು, "ಪ್ರಪಂಚದಲ್ಲಿ ಆ ಸರೋವರವು ಎಲ್ಲಿದ್ದರೂ ಹುಡುಕಿ, ಅದರ ನೀರನ್ನು ತಂದು ರಾಜಕುಮಾರಿಯನ್ನು ಮದುವೆಯಾಗುತ್ತೇನೆ" ಎಂದು ಶಪಥಮಾಡಿ ಆಗಿಂದಾಗಲೇ ಪ್ರಯಾಣಕ್ಕೆ ಸಿದ್ಧನಾಗಿ ಹೊರಟುಬಿಟ್ಟನು.

ಎರಡನೆಯವನು ವಿಜಯಪುರಿಯ ಯುವರಾಜನಾದ ವಿಜಯ. ಅವನಿಗೆ ಒಂದು ಆಲೋಚನೆ ಬಂದಿತು. ರಾಜಕುಮಾರಿ ಯಾವ ಸರೋವರದಲ್ಲಿ



ಸ್ನಾನಮಾಡಿ ರೂಪ ಬದಲಾವಣೆ ಗೊಂಡಳೋ, ಆ ಸರೋವರದ ಹತ್ತಿರವೇ ಅವಳ ಬದಲಾವಣೆಗೆ ಕಾರಣ ಕೂಡಾ ಕಾಣಸಿಗಬಹುದು. ಹೀಗೆಂದು ಕೊಂಡು ವಿಜಯನು, ಆ ಸರೋವರಕ್ಕೆ ದಾರಿ ತಿಳಿದು ಕೊಂಡು ಅಲ್ಲಿಗೆ ಹೋದನು.

ಪಂಚವರ್ಣ ಸಂಜೀವಿನಿ ಪರ್ವತವನ್ನು ಹುಡುಕುತ್ತಾ ಹೊರಟ ಜಯಂತನು, ದಾರಿಯಲ್ಲೆಲ್ಲೂ ನಿಲ್ಲದೆ ಪ್ರಯಾಣ ಮಾಡುತ್ತ, ಆ ರಾತ್ರಿಯಲ್ಲಿ ದಟ್ಟವಾದೊಂದು ಕಾಡಿನ ನಡುವೆ ಕಾಣಿಸಿದ ಕಾಳಿಕಾಲಯವನ್ನು ಸೇರಿ, ಅಲ್ಲಿ ಸುತ್ತುಮುತ್ತಿನ ಮರಗಳಲ್ಲಿದ್ದ ಯಾವುದೋ ಹಣ್ಣುಗಳನ್ನು ತಿಂದು ಹಸಿವೆಯನ್ನು ಅಡಗಿಸಿದನು. ಬಳಿಕ ಆಲಯದ ಮಂಟಪದಲ್ಲಿ ಒಂದುಕಡೆಯಲ್ಲಿ ಮಲಗಿ ಆ ರಾತ್ರಿಯನ್ನು ಕಳೆಯಲು ನಿಶ್ಚಯಿಸಿದನು.

ಅಲ್ಲಿ ಅವನಿಗೆ ನಿದ್ದೆ ಹಿಡಿಯುವುದಕ್ಕೆ ಮೊದಲೇ ಒಂದು ಕರಡಿ ಘೂಂಕರಿಸುತ್ತಾ ಆಲಯದೊಳಗೆ ಪ್ರವೇಶಿಸಿ ಜಯಂತನ ಮೇಲೆ ಹಾರಿತು. ವೀರನೂ ಧೀರನೂ ಆದ ಜಯಂತನು ತಟಕ್ಕನೆದ್ದು, ತನ್ನ ಕರವಾಲವನ್ನು ಹಿರಿದು ಆ ಕರಡಿಯೊಂದಿಗೆ ಹೋರಾಡಿ ಅದನ್ನು ಕೊಂದುಬಿಟ್ಟನು.

ಸಾಯುವಾಗ ಕರಡಿ ಅದೃಶ್ಯವಾಗಿ ಅಲ್ಲೊಬ್ಬ ಮುನಿ ಪ್ರತ್ಯಕ್ಷನಾಗಿ, "ಅಪ್ಪಾ, ಗುರುಗಳ ಶಾಪಕ್ಕೆ ಗುರಿಯಾಗಿದ್ದ ನನಗೆ ಶಾಪವಿಮೋಚನೆಯಾಗುವಂತೆ ಮಾಡಿದೆ. ನಿನಗೆ ನನ್ನಿಂದೇನಾದರೂ ಉಪಕಾರವಾಗ ಬೇಕಾಗಿದ್ದರೆ ಹೇಳು, ಮಾಡುತ್ತೇನೆ" ಎಂದನು.

"ಸ್ವಾಮಿ, ನಾನು ಪಂಚವರ್ಣ ಸಂಜೀವಿನಿ ಸರೋವರದಿಂದ ನೀರನ್ನು ತೆಗೆದುಕೊಂಡು ಬರಲು ಹೊರಟಿದ್ದೇನೆ. ಅಲ್ಲಿಗೆ ಹೋಗುವ ದಾರಿಯನ್ನು ತಿಳಿಸಿ ಪುಣ್ಯಕಟ್ಟಿಕೊಳ್ಳಿ" ಎಂದ ಜಯಂತ.

"ಅಪ್ಪಾ, ಅದು ಮೇರು ಪರ್ವತದ ಮೇಲಿದೆ. ಅಲ್ಲಿಗೆ ಹೋಗಿ ಸೇರಲು ನಿನ್ನ ಆಯುಷ್ಯವೆಲ್ಲ ಸವೆದರೂ ಸಾಕಾಗಲಿಕ್ಕಿಲ್ಲ" ಎಂದ ಮುನಿ.

"ಆ ಪ್ರಯತ್ನದಲ್ಲಿ ಸಾಯಲಿಕ್ಕೂ ಸಿದ್ಧನಾಗಿದ್ದೇನೆಯೇ ಹೊರತು, ಹಿಂದಿರುಗಿ ಹೋಗಲಾರೆ. ದಾರಿ ತಿಳಿಸಿ" ಎಂದನು ಜಯಂತ.

ಮುನಿ ಅವನ ದೃಢ ಮನಸ್ಸಿಗೆ ಮೆಚ್ಚಿ ಅವನಿಗೆ ತನ್ನ ಪಾದರಕ್ಷೆಗಳನ್ನು ಕೊಟ್ಟು, "ಇವುಗಳ ಸಹಾಯದಿಂದ ನೀನು ಆಕಾಶ ಮಾರ್ಗದಿಂದ ಆ ಸರೋವರವನ್ನು ತಲಪುವೆ. ನಿನ್ನ ಕೆಲಸ ತೀರಿದ ಕೂಡಲೆ ಈ ಪಾದರಕ್ಷೆಗಳು ನನ್ನ ಬಳಿಗೆ ಹಿಂದಿರುಗಿ ಬರುತ್ತವೆ. ಇವುಗಳನ್ನು ಮತ್ತೊಂದು ವಿಧವಾಗಿ ಉಪಯೋಗಿಸಿ ಬಿಡಬೇಡ" ಎಂದು ಹೇಳಿ ಅಂತರ್ಧಾನನಾದನು.

ಜಯಂತನು ಆ ಪಾದರಕ್ಷೆಗಳನ್ನು ಧರಿಸಿದ ಕೂಡಲೇ ಭೂಮಿಯನ್ನು ಬಿಟ್ಟು ಮೇಲೇರಿದನು. ಆಕಾಶದಲ್ಲಿ ಗಾಳಿಯ ಮಾರ್ಗದಿಂದ ಮೇರು ಪರ್ವತದ ಕಡೆಗೆ ಸಾಗತೊಡಗಿದನು. ನಿಮಿಷಮಾತ್ರದಲ್ಲಿ ಅವನು ಮೇರು ಪರ್ವತವನ್ನು ತಲಪಿದನು.

ಇಷ್ಟರೊಳಗೆ ಇತ್ತ ವಿಜಯನು ವನಮಧ್ಯದಲ್ಲಿದ್ದ ಸರೋವರದ ಬಳಿಗೆ ಹೋಗಿ ಆ ದಿನವಿಡೀ ಆ ಪ್ರಾಂತದಲ್ಲೇ ತಿರುಗಾಡಿಕೊಂಡಿದ್ದನು. ಆ ರಾತ್ರಿಯನ್ನು ಅರೆ ನಿದ್ರೆಯಲ್ಲೇ ಕಳೆದನು. ಬೆಳಗ್ಗೆ ಸೂರ್ಯೋದಯವಾಗುವ ಮೊದಲೇ ಯಾವನೋ ಒಬ್ಬ ಮುನಿ ಆ ಸರೋವರದ ಬಳಿಗೆ ಬಂದು, ಅದರಲ್ಲಿ ಸ್ನಾನಮಾಡಿ ಹೊರಟುಹೋಗಲು ಸಿದ್ಧನಾದನು.

ಅದನ್ನು ನೋಡಿ ವಿಜಯನಿಗೆ ಆಶ್ಚರ್ಯವಾಯಿತು. ಅವನ ರೂಪವು ಏನೂ ವ್ಯತ್ಯಾಸವಾಗಿರಲಿಲ್ಲ. ಕೂಡಲೇ ಅವನು ಆ ಮುನಿಯ ಬಳಿಗೆ ಹೋಗಿ "ಸ್ವಾಮಿ, ನೀವೇ ನನ್ನನ್ನು ಕಾಪಾಡಬೇಕು" ಎನ್ನುತ್ತಾ ಮುನಿಯ ಕಾಲು ಹಿಡಿದನು.

"ಹೆದರಬೇಡವಪ್ಪಾ, ಯಾರು ನೀನು? ನಿನಗೆ ಬಂದ ಕಷ್ಟವೇನು? ಧೈರ್ಯದಿಂದ ಹೇಳು" ಎಂದು ಮುನಿ ವಿಜಯನನ್ನು ಕೇಳಿದನು.

"ಈ ಸರೋವರದಲ್ಲಿ ಸ್ನಾನಮಾಡಿದ ರಾಜಕುಮಾರಿ ತನ್ನ ಸೌಂದರ್ಯವನ್ನೆಲ್ಲಾ ಕಳೆದುಕೊಂಡಳು. ನೀವೂ ಇದರಲ್ಲಿ ಸ್ನಾನಮಾಡಿದಿರಿ. ಆದರೆ ನಿಮ್ಮಲ್ಲಿ ಯಾವ ಬದಲಾವಣೆಯೂ ಕಾಣಲಿಲ್ಲ. ಆ ರಾಜಕುಮಾರಿಗೆ ಮತ್ತೆ ಮೊದಲಿನ ರೂಪ ಬರುವ ಹಾಗೆ ಮಾಡುವ ಮಾರ್ಗ ಯಾವುದೆಂದು ನಿಮಗೆ ಗೊತ್ತಿರಬೇಕು. ಆದುದರಿಂದ ಯಾವ ತಪ್ಪೂ ತಿಳಿಯದವಳನ್ನು ಕಾಪಾಡುವ ಮಾರ್ಗವನ್ನು ನನಗೆ ಹೇಳಿ ಪುಣ್ಯ ಕಟ್ಟಿಕೊಳ್ಳಿ, ಸ್ವಾಮಿ" ಎಂದ ವಿಜಯ.

"ನೀನು ಹೇಳುವುದು ನಿಜವೇ. ಇದು ನನ್ನ ತಪಶ್ಶಕ್ತಿಯಿಂದ ಸೃಷ್ಟಿಸಲ್ಪಟ್ಟ ಸರೋವರ. ಇದರಲ್ಲಿ ಸ್ನಾನ ಮಾಡಿದವರ ಸೌಂದರ್ಯವು ಹರಣವಾಗಿ ಹೋಗುವಂತೆ ನಾನೇ ಏರ್ಪಡಿಸಿದವನು. ಕಂಡ ಕಂಡವರೆಲ್ಲ ಇದರಲ್ಲಿ ಇಳಿದು ಮಲಿನಗೊಳಿಸುವುದು ನನಗಿಷ್ಟವಿಲ್ಲ. ರಾಜಕುಮಾರಿ ಎಂದಿನಂತಾಗಬೇಕಾದರೆ ನೀನೊಂದು ಕೆಲಸ ಮಾಡಬೇಕು. ನಿನ್ನ ಸೌಂದರ್ಯವನ್ನು ನೀನು ರಾಜಕುಮಾರಿಗೆ ಧಾರೆಯೆರೆದು ಕೊಡುವ ಪಕ್ಷದಲ್ಲಿ ಇದರಲ್ಲಿ ನೀನು ಸ್ನಾನ ಮಾಡಬೇಕು. ಹಾಗೆ ಮಾಡಿದರೆ ನನ್ನ ಶಾಪಕ್ಕೆ ವಿಘ್ನ





ಬರುವುದಿಲ್ಲ. ಆದರೆ ನೀನು ಮಾತ್ರ ಕುರೂಪಿಯಾಗಿ ಹೋಗುತ್ತೀ. ಇದಾಗಬಹುದಾದರೆ ನೋಡು" ಎಂದ ಮುನಿ.

"ಧನ್ಯನಾದೆ ಸ್ವಾಮಿ" ಎಂದು ಹೇಳಿ ವಿಜಯನು ತನ್ನ ಸೌಂದರ್ಯವನ್ನು ಧಾರೆಯೆರೆದು ಕೊಟ್ಟಂತೆ ಪ್ರಮಾಣ ಮಾಡಿ, ಸರೋವರದಲ್ಲಿ ಇಳಿದು ಸ್ನಾನ ಮಾಡಿ ಎದ್ದನು. ಆದರಿಂದ ಕುರೂಪಿಯಾಗಿ ಹೋದರೂ, ಒಂದು ಬಗೆಯ ಸಂತೃಪ್ತಿಯಿಂದಲೇ ರಾಜಭವನಕ್ಕೆ ಹಿಂದಿರುಗಿದನು.

ಅಷ್ಟರೊಳಗೆ ಅಲ್ಲಿ ರಾಜಕುಮಾರಿ ಇದ್ದಕ್ಕಿದ್ದ ಹಾಗೆ ಎಂದಿನ ರೂಪವನ್ನು ಪಡೆದಿರುವುದನ್ನು ನೋಡಿ ತಂದೆತಾಯಿ ಮುಂತಾದವರಿಗೆಲ್ಲ ಅತ್ಯಾಶ್ಚರ್ಯವೂ ಆನಂದವೂ ಆಯಿತು. ಆ ಸಮಯದಲ್ಲಿ ಕುರೂಪಿಯಾಗಿ ಮಾರ್ಪಟ್ಟ ವಿಜಯನು ಬಂದು ರಾಜಕುಮಾರಿಗೆ ಯಥಾ ರೂಪ ಬಂದಿರುವುದಕ್ಕೆ ಸಂತೋಷಗೊಂಡನು. ಆದಕ್ಕಾಗಿ ತಾನು ಮಾಡಿದ ಕಾರ್ಯವನ್ನು ಕೂಡಾ ಹೇಳಿದನು. ಹೀಗಿರುವಾಗಲೇ ಜಯಂತನು ಸಂಜೀವಿನೀ ಔಷಧ ಜಲದೊಂದಿಗೆ ಬಂದು ತಲಪಿ, "ಇದೋ ಸಂಜೀವಿನೀ ಜಲ! ನನ್ನ ಶಪಥದಂತೆ ಕೆಲಸ ಮಾಡಿದ್ದೇನೆ. ಈ ಜಲದಿಂದ ರಾಜಕುಮಾರಿಗೆ ಯಥಾ ರೂಪವನ್ನು ಬರಿಸಿ, ಅವಳನ್ನು ಮದುವೆಯಾಗುತ್ತೇನೆ" ಎಂದನು.

ಆಗ ರಾಜಕುಮಾರಿ ಅವನ ಇದಿರಿಗೆ ಬಂದು, "ನಿಮಗೆ ವೃಥಾ ಶ್ರಮವಾಯಿತು. ನನಗೆ ಮೊದಲಿನ ರೂಪ ಬಂದುಬಿಟ್ಟಿತು ನೋಡಿದಿರಾ?" ಎಂದಳು.

ತರುವಾಯ ಜಗನ್ಮೋಹಿನಿಯನ್ನು ಯಾರು ಮದುವೆಯಾಗುವುದೆಂಬ ಸಮಸ್ಯೆ ಬಂದಿತು. ರೂಪವನ್ನು ಹೋಗಲಾಡಿಸಿಕೊಂಡು ವಿಕಾರನಾಗಿದ್ದರೂ ತಾನು ವಿಜಯನನ್ನೇ ಮದುವೆಯಾಗುವೆನೆಂದು ಜಗನ್ಮೋಹಿನಿ ಹೇಳಿದಳು. ತಾನು ಅತ್ಯಂತ ಕಷ್ಟಗಳನ್ನು ಅನುಭವಿಸಿ ಪಂಚವರ್ಣ ಸಂಜೀವಿನಿ ಸರೋವರದ ನೀರನ್ನು ತಂದರೆ ಅವಳು ತನ್ನನ್ನು ನಿರಾಕರಿಸಿ ಕುರೂಪಿಯಾದ ವಿಜಯನನ್ನೇ ವರಿಸುವೆನೆನ್ನುವುದು ಸರಿಯಾದುದಲ್ಲವೆಂದು ಜಯಂತನು ಹೇಳಿದನು.

ಆಗ ಮಂತ್ರಿ ಅವನನ್ನು ಕುರಿತು, "ನೀನೇ ನ್ಯಾಯವನ್ನು ಹೇಳಪ್ಪ. ಪಂಚವರ್ಣ ಸಂಜೀವಿನಿ ಸರೋವರ ಎಲ್ಲಿರುವುದೆಂದು ಯಾರಿಗೂ ತಿಳಿಯದು. ಅದರ ನೀರನ್ನು ನೀನು ಮೂರೇ ದಿನಗಳೊಳಗೆ ತಂದೆಯೆಂದರೆ ನಂಬುವುದಾದರೂ ಹೇಗಪ್ಪ?" ಎಂದನು.

"ಹಾಗಾದರೆ ಬಿಡಿ. ರಾಜಕುಮಾರಿ ನನ್ನನ್ನು ಮದುವೆಯಾಗದಿದ್ದರೂ ಚಿಂತೆಯಿಲ್ಲ. ನಾನು ಮೋಸ ಮಾಡುವೆನೆಂಬ ಮಾತನ್ನು ಮಾತ್ರ ಸಹಿಸಲಾರೆ" ಎಂದು ಹೇಳಿ ಜಯಂತನು ತಾನು ತಂದ ಜಲವನ್ನು ವಿಜಯನಿಗೆ ಕೊಟ್ಟು, ಕುಡಿಯಲು ಹೇಳಿದನು.

ವಿಜಯನು ಆ ನೀರನ್ನು ಕುಡಿದು ಯಥಾ ರೂಪವನ್ನು ಹೊಂದಿದನು. ಜಯಂತನು 'ಎಲ್ಲರನ್ನೂ ಗೆಲುಮೆಯ ಗರ್ವದಿಂದ ನೋಡಿ ತುಂಬಸಂತೃಪ್ತ

ಾದವನಂತೆ ತನ್ನ ದೇಶಕ್ಕೆ ಹೊರಟುಹೋದನು. ವಿಜಯನಿಗೆ ಜಗನ್ಮೋಹಿನಿಯೊಂದಿಗೆ ಬಹು ವಿಜೃಂಭಣೆಯಿಂದ ವಿವಾಹ ನೆರವೇರಿತು.

ಹೀಗೆ ಕಥೆಯನ್ನು ಮುಗಿಸಿ ಬೇತಾಳವು,–"ರಾಜಾ, ಜಯಂತನು ಹಾಗೇಕೆ ವರ್ತಿಸಿದ? ತಾನು ತಂದ ನೀರು ಪಂಚವರ್ಣ ಸಂಜೀವಿನಿಯದೆಂದು ನಿರೂಪಿಸಿದ ಮೇಲೆ ಕೂಡಾ ಅವನು ಜಗನ್ಮೋಹಿನಿಯನ್ನು ಮದುವೆಯಾಗಲು ಏಕೆ ಹಟ ಹಿಡಿಯಲಿಲ್ಲ? ಅದರ ಮೇಲೆ ತಾನು ತಂದ ನೀರನ್ನು ತನ್ನ ಪ್ರತಿಸ್ಪರ್ಧಿಗೆ ಕೊಟ್ಟನೇಕೆ? ಕುರೂಪಿಯಾದ ವಿಜಯನನ್ನು ಮದುವೆಯಾಗುವೆನೆಂದು ಜಗನ್ಮೋಹಿನಿ ಹಟ ಹಿಡಿದಳೇಕೆ? ಈ ಪ್ರಶ್ನೆಗಳಿಗೆ ಸರಿಯಾದ ಉತ್ತರ ತಿಳಿದಿದ್ದೂ ಹೇಳದೆ ಹೋದರೆ, ನಿನ್ನ ತಲೆ ಒಡೆದು ಪುಡಿಪುಡಿಯಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನೆಂದನು:–"ರಾಜಕುಮಾರಿ ವಿಜಯನನ್ನು ಮದುವೆಯಾಗಲು ನಿಶ್ಚಯಿಸಿದ್ದು ಧರ್ಮವೇಸರಿ. ಪಂಚವರ್ಣ ಸಂಜೀವಿನೀ ಜಲವು ಅವಳಿಗೆ ಸೌಂದರ್ಯ ಕೊಡಲಿಕ್ಕೆ ಮಾತ್ರ ಸಾಧನವಾಗುವಂಥಾದ್ದು. ಸ್ಪರ್ಧಾಳುಗಳ ಲಕ್ಷ್ಯವಾದರೋ ಅವಳಿಗೆ ಮೊದಲಿನ ರೂಪ ಬರಬೇಕೆಂಬುದೇ. ಆ ಕೆಲಸ ಸಾಧಿಸಿದವನು ವಿಜಯನೇ. ಅವನು ಕುರೂಪಿಯಾದ ಕಾರಣದಿಂದ ರಾಜಕುಮಾರಿ ಅವನನ್ನು ನಿರಾಕರಿಸಿದರೆ ಅಧರ್ಮವಾಗುತ್ತದೆ. ಅಲ್ಲದೆ ಜಯಂತನಿಗೂ ವಿಜಯನಿಗೂ ಬಹಳ ವ್ಯತ್ಯಾಸವಿದೆ. ಜಯಂತನು ಕೀರ್ತಿಯನ್ನಾಶಿಸುವವನು. ಅವನಿಗೆ ರಾಜಕುಮಾರಿಯನ್ನು ಮದುವೆಯಾಗುವುದಕ್ಕಿಂತಲೂ ಸಂಜೀವಿನೀ ಜಲವನ್ನು ತಂದೆನೆಂಬ ಕೀರ್ತಿಯೇ ಮುಖ್ಯ. ತನ್ನ ಕೀರ್ತಿಗೆ ಕಳಂಕ ಬಾರದಂತಿರಲಿಕ್ಕಾಗಿಯೇ ತಾನು ತಂದ ಜಲವನ್ನು ವಿಜಯನಿಗೆ ಕೊಟ್ಟನು. ಅದರಿಂದ ಅವನಿಗಾದ ದೊಡ್ಡ ನಷ್ಟವೇನಿಲ್ಲ. ಕುರೂಪಿಯಾಗಿದ್ದಾಗಲೇ ವಿಜಯನನ್ನು ಮದುವೆಯಾಗುವೆನೆಂದಿದ್ದ ರಾಜಕುಮಾರಿ ಅವನು ಮೊದಲಿನಂತೆ ರೂಪವಂತನಾದರೆ ಹೇಗೂ ವರಿಸಿ ತೀರುವಳು. ಈ ಸಂಗತಿ ಜಯಂತನಿಗೆ ಗೊತ್ತೇ ಇತ್ತು. ವಿಜಯನಲ್ಲಿ ರಾಜಕುಮಾರಿಗೆ ಮೊದಲಿನ ರೂಪ ಬರುವಂತೆ ಮಾಡಬೇಕೆಂಬ ಮುಖ್ಯ ಬಯಕೆಯು ಹೊರತು ಬೇರೆ ಹಟವೇನಿರಲಿಲ್ಲ. ಅದಕ್ಕಾಗಿಯೇ ಅವನು ಮುನಿಯ ಕಾಲಿಗೆ ಬಿದ್ದನು. ತನ್ನ ಸೌಂದರ್ಯವನ್ನು ಧಾರೆಯೆರೆದನು. ಹೀಗೆ ಗಟ್ಟಿ ಲಕ್ಷ್ಯವುಳ್ಳ ಅವನೇ ರಾಜಕುಮಾರಿಗೆ ತಕ್ಕ ವರನೆನ್ನಲು ಸಂದೇಹವೇ ಇಲ್ಲ"

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.



# ನಿಜವಾಗಿ ನಂಬಿದವನು

ಒಂದಾನೊಂದು ಪ್ರಾಂತಕ್ಕೆ ಒಮ್ಮೆ ಬರಗಾಲ ಬಂದಿತು. ಗ್ರಾಮಸ್ಥರೆಲ್ಲಾ ದೇವಾಲಯಕ್ಕೆ ಹೋಗಿ ಮಳೆಗಾಗಿ ಜಪ, ಹೋಮ, ಪ್ರಾರ್ಥನೆ ಪೂಜೆಗಳನ್ನು ನಡೆಸಲು ನಿಶ್ಚಯಿಸಿದರು. ಅದಕ್ಕಾಗಿ ಬೆಳಿಗ್ಗೆ ಗ್ರಾಮಸ್ಥರೆಲ್ಲಾ ದೇವಾಲಯಕ್ಕೆ ಹೊರಟರು. ಅವರೊಂದಿಗೆ ಒಬ್ಬ ಚಿಕ್ಕ ಹುಡುಗ ಕೊಡೆಯನ್ನು ತೆಗೆದು ಕಂಕುಳಲ್ಲಿಟ್ಟುಕೊಂಡು ಹೊರಟನು. ಅದನ್ನು ನೋಡಿ ಹಿರಿಯರು, "ಕೊಡೆ ಏತಕ್ಕೋ—ಆಕಾಶದಲ್ಲಿ ಒಂದೇ ಒಂದು ಪುಟ್ಟ ಮೋಡ ಕೂಡಾ ಕಾಣಿಸುತ್ತಿಲ್ಲವಲ್ಲಾ ?" ಎಂದರು.

"ಈಗ ಇಲ್ಲ, ನಿಜ. ಹೋಮ, ಜಪ, ಪ್ರಾರ್ಥನೆಗಳೆಲ್ಲಾ ಮುಗಿದಾಗ ಮಳೆ ಬರುತ್ತದಷ್ಟೆ ? ಆಗ ಜಿರಿಜಿರಿ ಮಳೆಯಲ್ಲಿ ಮನೆಗೆ ಹಿಂದಿರುಗಬೇಡವೆ ?" ಎಂದ ಹುಡುಗ.

ಅಷ್ಟೂ ಮಂದಿ ಗ್ರಾಮಸ್ಥರೊಳಗೆ ಪ್ರಾರ್ಥನೆಯಲ್ಲಿ ನಿಜವಾದ ನಂಬುಗೆ ಇಟ್ಟವನೆಂದರೆ, ಆ ಹುಡುಗನೊಬ್ಬನೇ.





# ಮೂಢರು

ಹಂಗರೀ ದೇಶದಲ್ಲಿ ಒಂದು ಗ್ರಾಮದಲ್ಲಿ ಒಬ್ಬ ರೈತನಿದ್ದ. ಅವನ ಹೆಂಡತಿ ಪರಮ ಮೂರ್ಖಳು. ಅವಳ ಮೂರ್ಖತೆಯೊಂದಿಗೆ ಸರಿತೂಗುವ ಹಾಗೆ ಮೊಂಡುತನವೂ ಅವಳಲ್ಲಿತ್ತು. ತನ್ನ ಗಂಡ ಯಾವ ಕೆಲಸ ಮಾಡಿದರೂ ಅವಳು ತಪ್ಪು ಹಿಡಿಯುತ್ತಿದ್ದಳು. ಗಂಡನು ಮಾಡುವ ಪ್ರತಿ ಕೆಲಸವನ್ನೂ ತಾನು ಇನ್ನೂ ಚೆನ್ನಾಗಿ ಮಾಡುತ್ತಿದ್ದೆನೆಂದುಕೊಳ್ಳುವಳು.

ಒಂದು ವರ್ಷದಲ್ಲಿ ರೈತನು ಹೊಲದ ಕೊಯಿಲು ಮುಗಿಸಿ, ಧಾನ್ಯ ಒಡೆದು ಎಲ್ಲಾ ಆದಮೇಲೆ, ಧಾನ್ಯಗಳನ್ನು ಸಂತೆಗೆ ಒಯ್ಯಲು ಸಿದ್ಧ ಮಾಡಿದ. ಅವನು ಧಾನ್ಯದ ಮೂಟೆಗಳನ್ನು ಗಾಡಿಯಲ್ಲೇರಿಸಿ, ಕೆಲಸದ ಹುಡುಗನನ್ನು ಕರೆದುಕೊಂಡು ಹೊರಡಲು ತಯಾರಾದಾಗ, ಅವನ ಹೆಂಡತಿ, "ನಿಮಗೇನೂ ವ್ಯಾಪಾರ ಗೊತ್ತಿಲ್ಲ. ನನ್ನನ್ನೂ ಜತೇಲಿ ಕರೆದುಕೊಂಡು ಹೋದರೆ ಧಾನ್ಯವನ್ನು ನಿಮಗಿಂತಲೂ ಒಳ್ಳೇ ಬೆಲೆಗೆ ಮಾರಬಲ್ಲೆ" ಎಂದಳು.

"ಹಾಗಾದರೆ ನೀನೇ ಹೋಗಿ ಮಾರಿಕೊಂಡು ಹಣದೊಂದಿಗೆ ಬಾ. ನಾನೇಕೆ?" ಎಂದ ರೈತ. ಹೆಂಡತಿ ಸರಿಯೆಂದು ಹೇಳಿ ಗಾಡಿಯಲ್ಲಿ ಏರಿ ಕುಳಿತು "ಧಾನ್ಯವನ್ನು ಯಾವ ಧರಕ್ಕೆ ಮಾರಬೇಕು?" ಎಂದು ಗಂಡನನ್ನು ಕೇಳಿದಳು.

"ಇರುವ ಧರ ಹೇಗೋ ನೋಡಿಕೊಂಡು ಹಾಗೆ ಮಾರು" ಎಂದ ಗಂಡ.

ರೈತನ ಹೆಂಡತಿ ಸಂತೆಗೆ ಹೋಗಿ ತಲಪಿದಳು. ಗಟ್ಟಿಗನಾದ ವ್ಯಾಪಾರಿಯೊಬ್ಬ ಅವಳ ಬಳಿಗೆ ಬಂದು "ಧಾನ್ಯ ಹೇಗೆ ಮಾರುವಿ?" ಎಂದು ಕೇಳಿದ.

"ಇರುವ ಧರ ಹೇಗೋ ಹಾಗೆ ಮಾರುತ್ತೇನೆ" ಎಂದಳು ರೈತನ ಹೆಂಡತಿ.

"ಇರುವ ಧರ ಹೇಗೆಂದು ನೋಡಿ ಬರುತ್ತೇನೆ." ಎಂದು ಹೇಳಿ ಆ ವ್ಯಾಪಾರಿ ಸ್ವಲ್ಪ ದೂರ ಹೋಗಿ ಬಂದು, "ಇರುವ ಧರ ಹೇಗೆಂದರೆ ಅರ್ಧವನ್ನು ಸಾಲವಾಗಿ ಕೊಡುವುದು, ಉಳಿದರ್ಧವನ್ನು ವಾಯಿದೆಯ ಮೇಲೆ ತೀರಿಸುವುದು" ಎಂದ.

"ಸರಿ. ಹಾಗೇ ಮಾರುತ್ತೇನೆ. ಹಣ ಯಾವಾಗ ಸಿಗುತ್ತದೆ?" ಎಂದು ಕೇಳಿದಳು ರೈತನ ಹೆಂಡತಿ.

"ಬರುವ ಸಂತೆಯ ದಿನ" ಎಂದ ವ್ಯಾಪಾರಿ.

"ಆದರೆ ನಾವು ಒಬ್ಬರನ್ನೊಬ್ಬರು ಗುರುತಿಸಿಕೊಳ್ಳುವುದು ಹೇಗೆ? ಸಂತೆಗೆ ಬಹಳ ಮಂದಿ

ಹಂಗರೀ ಜಾನಪದ ಕಥೆ

ಬರುತ್ತಾರಷ್ಟೆ ?'' ಎಂದು ರೈತನ ಹೆಂಡತಿ ಕೇಳಿದಳು. ''ನನ್ನ ಹಳೆಯ ಕೋಟು ನಿನಗೆ ಕೊಟ್ಟಿರುತ್ತೇನೆ; ನಿನ್ನ ಉಣ್ಣೆಯ ಹಚ್ಚಡ ನನಗೆ ಕೊಟ್ಟುಬಿಡು. ಅವರವರ ವಸ್ತುಗಳು ಕಣ್ಣಿಗೆ ಬಿದ್ದಕೂಡಲೇ ಗುರುತು ತಾನಾಗಿ ಗೊತ್ತಾಗುತ್ತದಷ್ಟೆ ?'' ಎಂದ ವ್ಯಾಪಾರಿ.

ಈ ಮಾತಿಗೆ ರೈತನ ಹೆಂಡತಿ ತೃಪ್ತಳಾಗಿ ತಾನು ಹೊದೆದುಕೊಂಡಿದ್ದ ಹಚ್ಚಡವನ್ನೂ, ಧಾನ್ಯದ ಮೂಟೆಗಳನ್ನೂ ಆ ವ್ಯಾಪಾರಿಯ ವಶಕ್ಕೆ ಕೊಟ್ಟು, ಅವನ ಹಳೆಯ ಕೋಟನ್ನು ತೆಗೆದುಕೊಂಡು, ತಾನು ಬಹಳ ಬುದ್ಧಿವಂತಿಕೆಯ ಕೆಲಸ ಮಾಡಿದೆನೆಂದುಕೊಂಡಳು. ಅಂತೆಯೇ ಅವಳು ದರ್ಪದಿಂದ ಮನೆಗೆ ಬಂದು, ತಾನು ಮಾಡಿದ ಧಾನ್ಯ ನಿರ್ವಾಹವನ್ನು ಕುರಿತು ಬಹಳ ಹೆಮ್ಮೆಯಿಂದ ಗಂಡನೊಂದಿಗೆ ಹೇಳಿದಳು.

ರೈತ ಹೆಂಡತಿಯ ಮೇಲೆ ಬಹಳ ಸಿಟ್ಟು ಮಾಡುತ್ತ ''ಛೀ, ಮೂಢಳೆ ! ನಿನ್ನಂತಹ ಬುದ್ಧಿಯಿಲ್ಲದ ಇನ್ನೊಂದು, ಹೆಣ್ಣು ಕಾಣಿಸುವವರೆಗೆ ನಾನು ಮನೆಗೆ ಬರಲಾರೆ !'' ಎಂದು ಹೇಳಿ ಮನೆ ಬಿಟ್ಟು ಹೊರಟುಹೋದ. ತನ್ನ ಹೆಂಡತಿಗಿಂತ ಹೆಚ್ಚಿನ ಮೂರ್ಖರು ಪ್ರಪಂಚದಲ್ಲಿರುವರೆಂಬುದನ್ನು ಅವನಿಂದ ನಂಬಲಾಗಲಿಲ್ಲ.

ಅವನು ತನ್ನ ಪಾಡಿಗೆ ನಡೆಯುತ್ತ ಅಡವಿ ದಾರಿಯ ಮೂಲಕ ಸಾಗುತ್ತಿರುವಾಗ, ಒಂದು ಮನೆಯಲ್ಲಿ ದೀಪದ ಬೆಳಕು ಕಾಣಿಸಿತು. ಅಡವಿಯ ನಡುವೆ ಹೊಲಗಳೂ ಮನೆಗಳೂ ಕಾಣಿಸಿದುವು.

ರೈತ ಆ ಮನೆಯ ಬಾಗಿಲು ತಟ್ಟಿದಾಗ, ಪ್ರಾಯ ಮೀರಿದ ಹೆಂಗುಸೊಬ್ಬಳು ಬಾಗಿಲು ತೆರೆದು, ''ಯಾರಪ್ಪಾ ? ಎಲ್ಲಿಂದ ಬರುತ್ತಿ ?'' ಎಂದು ಕೇಳಿದಳು. ಈ ಹೆಂಗುಸಿನ ಬುದ್ಧಿವಂತಿಕೆ ಹೇಗೆಂದು ನೋಡಲು ರೈತ, ''ಈಗ ತಾನೇ ಪರಲೋಕದಿಂದ ಬರುತ್ತಿದ್ದೇನೆ'' ಎಂದ.

ಅವಳು ಏನೂ ಆಶ್ಚರ್ಯವನ್ನು ವ್ಯಕ್ತಪಡಿಸದೆ, ''ಹಾಗಾದರೆ ನನ್ನ ಮಗನನ್ನೇನಾದರೂ ನೋಡಿದಿಯಾ ? ಗೊತ್ತೇ ನಿನಗೆ ?'' ಎಂದು ಕೇಳಿದಳು. ಇವಳ ಮೂಢತ್ವ ಎಷ್ಟು ಆಳದವರೆಗಿದೆಯೋ



ನೋಡುವ ಕುತೂಹಲದಿಂದ ರೈತ, "ಗೊತ್ತಿಲ್ಲದೆ ಏನಮ್ಮಾ ? ಪಾಪ, ಅವನು ಹರಕು ಬಟ್ಟೆ ಉಟ್ಟುಕೊಂಡು ಎಲುವುಗಳನ್ನೂ ಬಟ್ಟೆ ಚೂರುಗಳನ್ನೂ ತೂರುತ್ತ, ತನ್ನ ಗಾಡಿ ತಾನೇ ಎಳೆಯುತ್ತ ತುಂಬಾ ಪಾಡುಪಡುತ್ತಿದ್ದಾನೆ ! ನೋಡಿದರೆ ಅಯ್ಯೋ ಅನಿಸುತ್ತದೆ" ಎಂದ.

"ಅಯ್ಯಯ್ಯೋ ! ನೀನು ಪುನಃ ಅಲ್ಲಿಗೆ ಹೋಗುವಿಯೇನಪ್ಪಾ ?" ಎಂದು ಕೇಳಿದಳು ಹೆಂಗುಸು.

"ಹೌದಮ್ಮ. ನಾಳೆ ಬೆಳಿಗ್ಗೆಯೇ ನಾನು ಅಲ್ಲಿ ಇರಬೇಕು" ಎಂದ ರೈತ.

"ಹಾಗಾದರೆ ಒಂದು ಕೆಲಸ ಮಾಡಪ್ಪ. ಹಬ್ಬಕ್ಕೆ ಮಾಡಿದ ದೊಡ್ಡದೊಡ್ಡ ಸಿಹಿಯಪ್ಪಗಳು ಇನ್ನೂ ಮೂರು ಉಳಿದಿವೆ. ನನ್ನ ಗಂಡನಿಗೆ ಗೊತ್ತಾಗದಂತೆ ಅಡಗಿಸಿಟ್ಟ ಹಣವೂ ಸ್ವಲ್ಪ ಇದೆ. ಸ್ವಲ್ಪ ಹೊತ್ತು ಇರಪ್ಪ. ಮೂರು ಬಾತು ಕೋಳಿಗಳನ್ನು ಅಡಿಗೆ ಮಾಡಿ ಕೊಡುತ್ತೇನೆ. ಅವುಗಳನ್ನೆಲ್ಲ ತೆಗೆದುಕೊಂಡು ಹೋಗಿ ನನ್ನ ಮಗನಿಗೆ ಕೊಟ್ಟುಬಿಡು. ಅಂದಹಾಗೆ ನನ್ನ ಗಂಡ ಯಾವಳನ್ನೋ ಮೋಸಪಡಿಸಿ ಒಳ್ಳೆಯ ಉಣ್ಣೇ ಹಚ್ಚಡ ಸಹಾ ತಂದಿಟ್ಟಿದ್ದಾನೆ. ಅದನ್ನು ಕೂಡಾ ಕೊಂಡೊಯ್ದು ನನ್ನ ಮಗನಿಗೆ ಕೊಟ್ಟುಬಿಡು" ಎಂದಳು ಆ ಹೆಂಗುಸು.

"ತನಗೆ ತಿಳಿಯದಂತೆಯೇ ಬರಬೇಕಾದ ಸ್ಥಳಕ್ಕೇ ಬಂದೆನೆಂದು ರೈತನಿಗೆ ಸಂತೋಷವೆನಿಸಿತು. ಆ ಮನೆಯ ಹೆಂಗುಸು ಅಡಿಗೆ ಮಾಡುತ್ತಿರುವಷ್ಟರವರೆಗೆ ಅವನು ವಿಶ್ರಾಂತಿ ತೆಗೆದುಕೊಂಡು, ಆಮೇಲೆ ಅವಳು ಕೊಟ್ಟುದನ್ನೆಲ್ಲಾ ತೆಗೆದುಕೊಂಡ. ತನ್ನ ಮಗನ ಗಾಡಿಗಾಗಿ ಅವಳು ಒಂದು ಕುದುರೆಯನ್ನೂ ಕೊಟ್ಟಳು. ಅದರ ಮೇಲೆ ಹತ್ತಿ ಅಲ್ಲಿಂದ ಹೊರಟುಬಿಟ್ಟ ರೈತ.

ಅವನು ಹೊರಟು ಹೋದ ಕೂಡಲೇ ಧಾನ್ಯದ ವ್ಯಾಪಾರಿ ತನ್ನ ಮನೆಗೆ ಬಂದ. ಅವನ ಹೆಂಡತಿ ನಡೆದ ಸಂಗತಿಯನ್ನೆಲ್ಲಾ ಅವನೊಂದಿಗೆ ಹೇಳಿದಳು. ಗಂಡ ಸಂತೋಷದಿಂದ ತನ್ನನ್ನು ಹೊಗಳುವನೆಂದು ಅವಳು ಸಂಭ್ರಮಗೊಂಡಿದ್ದರೆ, ಅವಳ ಮಾತು ಕೇಳಿ ವ್ಯಾಪಾರಿ, "ಛೀಛೀ ! ದರಿದ್ರದವಳೇ ! ನಿನ್ನ



ಬುದ್ಧಿಗೆ ಬೆಂಕೀ ಹಚ್ಚ !" ಎಂದು ಹೆಂಡತಿಯನ್ನು ಬಾಯಿಗೆ ಬಂದ ಹಾಗೆ ಬಯ್ಯುತ್ತ ಮನೆಯಿಂದ ಒಮ್ಮೆಗೇ ರೈತಹೋದ ದಿಕ್ಕಿಗೆ ಓಡಿಹೋದ.

ತನ್ನ ಹಿಂದೆ ಯಾವನೋ ಓಡಿಬರುತ್ತಿರುವನೆಂದು ಕುದುರೆಯ ಮೇಲೆ ಹೋಗುತ್ತಿದ್ದ ರೈತನಿಗೆ ತಿಳಿಯಿತು. ಕೂಡಲೇ ಅವನು ಅಡವಿಯೊಳಗೆ ಅಡ್ಡ ತಿರುಗಿ, ಕುದುರೆಯನ್ನು ಒಂದು ಮರಕ್ಕೆ ಕಟ್ಟಿಹಾಕಿ, ತಾನು ಮಾತ್ರ ಮತ್ತೆ ದಾರಿಯ ಬದಿಗೆ ಬಂದು, ಒರಗಿದಂತಿದ್ದ ಒಂದು ಮರದ ಕಾಂಡಕ್ಕೆ ಭುಜವನ್ನು ಊರುಗೊಟ್ಟವನ ಹಾಗೆ ನಿಂತ.

ಸ್ವಲ್ಪ ಹೊತ್ತಿಗೆ ಧಾನ್ಯದ ವ್ಯಾಪಾರಿ ಅವನ ಬಳಿಗೆ ಬಂದು, "ಈ ದಾರಿಯಾಗಿ ಕುದುರೆಯ ಮೇಲೆ ಯಾವನಾದರೂ ಹೋದುದನ್ನು ನೋಡಿದೆಯಾ ?" ಎಂದು ಕೇಳಿದ.

"ಹೋದ. ಆದರೆ ನೀನು ಅವನ ಗೊಡವೆಗೆ ಹೋಗಬೇಡಪ್ಪ. ಈ ಮರವನ್ನು ಗುದ್ದಿ ಹೋದ. ಮಹಾಬಲಶಾಲಿ" ಎಂದ ರೈತ.

"ನಿನಗಿಂತಲೂ ಬಲಶಾಲಿಯೇನು ?" ಎಂದು ವ್ಯಾಪಾರಿ ಕೇಳಿದ.

"ಅಲ್ಲ" ಎಂದ ರೈತ.

"ನೀನು ಹೋಗಿ ಅವನನ್ನು ಸ್ವಲ್ಪ ಹಿಡಿದು ಕೊಂಡು ಬರುತ್ತೀಯಾ ? ನಿನ್ನ ಶ್ರಮಕ್ಕೆ ಹಣ ಕೊಡುತ್ತೇನೆ" ಎಂದ ವ್ಯಾಪಾರಿ. "ನಾನು ಹೇಗೆ ಹೋಗಲಿ ? ಈ ಮರ ಬಿದ್ದುಹೋಗದಂತೆ ನಿಲ್ಲಿಸದಿದ್ದರೆ ನನ್ನ ಕುಟುಂಬವೇ ನಾಶವಾಗುತ್ತದೆ. ಅದೊಂದು ಶಾಪ" ಎಂದ ರೈತ.

"ನೀನು ತಿರುಗಿ ಬರುವವರೆಗೆ ಈ ಮರ ಬೀಳದಂತೆ ನಾನು ಹಿಡಿದುಕೊಂಡಿರುತ್ತೇನೆ. ಆ ದುಷ್ಟ ವಂಚಕನನ್ನು ಬೇಗನೇ ಅಡ್ಡಗಟ್ಟಿ ಹಿಡಿದು ಎಳೆದುಕೊಂಡು ಬಾ. ಅವನು ನನ್ನ ಹೆಂಡತಿಯನ್ನು ಮೋಸಮಾಡಿ ಭಾರೀ ಕೊಳ್ಳೆ ಹೊಡೆದ" ಎನ್ನುತ್ತಾ ಧಾನ್ಯದ ವ್ಯಾಪಾರಿ, ಆ ಮರಕ್ಕೆ ತನ್ನ ಭುಜವನ್ನು ಊರು ಗೊಟ್ಟು ನಿಂತ.

ರೈತ ಅತ್ತ ಹೋಗಿ ತನ್ನ ಕುದುರೆಯನ್ನು ಬಿಚ್ಚಿ, ಅದರ ಮೇಲೆ ಹತ್ತಿ ತನ್ನ ಮನೆಗೆ ನೆಮ್ಮದಿಯಾಗಿ ಹೋಗಿ ಸೇರಿ. ತನ್ನ ಹೆಂಡತಿಯನ್ನು ನೋಡಿ, "ನೋಡಿದೆನಪ್ಪ. ನಿನಗಿಂತಲೂ ಬುದ್ಧಿಹೀನರು ಇನ್ನೂ ಬಹಳ ಮಂದಿ ಇದ್ದುದನ್ನು ನೋಡಿದೆ. ಅದಕ್ಕೇ ಮನೆಗೆ ಬಂದೆನೆಂದು ತಿಳಿದುಕೋ !" ಎಂದ.

"ನಾನು ಆಗಲೇ ಆ ಮಾತು ಹೇಳಿದ್ದೆನಲ್ಲಾ ! ಏನೋ ನಾನೊಬ್ಬಳೇ ಮೂಢಳೆಂಬ ಹಾಗೆ ಹಾರಾಡಿದಿರಿ ಸುಮ್ಮನೆ !" ಎಂದಳು ಅವನ ಹೆಂಡತಿ.

"ಬಹಳ ಬುದ್ಧಿವಂತಿಕೆಯಿಂದ ಹೇಳಿದೆ !" ಎಂದು ತನ್ನೊಳಗೇ ಹೇಳಿಕೊಂಡ ರೈತ.






# ಅಬೂ ಕೀರ್ ಸೀರ್

೩

ರಂಗಾರೀ ಅಬೂಕೀರ್, ಅಬೂಸೀರನನ್ನು ಬಿಟ್ಟು, ಅವನ ಸೊತ್ತನ್ನೆಲ್ಲ ಎತ್ತಿಕೊಂಡು ಹೋದಮೇಲೆ, ಅಬೂಸೀರ್ ಮೂರು ದಿನಗಳವರೆಗೆ ಸ್ಮೃಹೆ ಇಲ್ಲದೆ ಬಿದ್ದುಕೊಂಡಿದ್ದನು.

ಆ ಮೂರು ದಿನಗಳವರೆಗೆ ಆ ಕೋಣೆಯೊಳಗಿನಿಂದ ಯಾರೂ ಹೊರಗೆ ಬರಲಿಲ್ಲ. ಕೋಣೆಯೊಳಗೆ ಹೋದವರೂ ಯಾರಿಲ್ಲ. ಇದನ್ನು ಗಮನಿಸಿ ಸತ್ರದ ದರ್ವಾನನು "ಇವರು ಹಣ ಕೊಡದೆ ಪರಾರಿಯಾಗಿರಬಹುದೆ ? ಅಲ್ಲ ಇಬ್ಬರೂ ಸತ್ತು, ಮಣ್ಣು ಮುಕ್ಕಿದರೋ ?" ಎಂದು ಕೊಳ್ಳುತ್ತ ಕೋಣೆಯ ಬಾಗಿಲನ್ನು ದೂಡಿ ಒಳಗೆ ಹೋದನು. ಅಲ್ಲಿ ಒಂದು ಮೂಲೆಯಲ್ಲಿ ಒಣಗಿ ಸಾಯಲು ಸಿದ್ಧನಾಗಿದ್ದ ಕೆಲಸಿಗ ಅಬೂಸೀರನನ್ನು ನೋಡಿದನು. ಅಬೂಸೀರ್ ಗಂಟಲಲ್ಲೇ ಮೂಲುಗಿ ಕೊಂಡಿದ್ದ.

"ಅಣ್ಣಾ, ನಿನಗೇನು ಬಂತು ? ಎರಡನೆಯುವ ನೆಲ್ಲಿ ?" ಎಂದು ದರ್ವಾನ ಅಬೂಸೀರನನ್ನು ಮುಟ್ಟಿ ತಡುವುತ್ತಾ ಕೇಳಿದ. "ನನಗೇನಾಯಿತೆಂದು ಅಲ್ಲಾ ನಿಗೇ ಗೊತ್ತು. ಎಷ್ಟು ಕಾಲ ನಿದ್ದೆಯಲ್ಲಿದ್ದೆನೋ ? ಈಗ ತಾನೇ ಎಚ್ಚರವಾಗಿದೆ. ಎಷ್ಟು ದಿನದಿಂದ ಉಪವಾಸವಾಗಿದ್ದೇನೋ ಏನೋ ? ತುಂಬಾ ದಾಹವಾಗಿದೆ. ಅಲ್ಲಿರುವ ನನ್ನ ಹಣದ ಚೀಲದಿಂದ ಹಣ ತೆಗೆದುಕೊಂಡು, ನನಗೇನಾದರೂ ತಂದು ಕೊಡಯ್ಯಾ" ಎಂದು ಅಬೂಸೀರ್ ಬಲಹೀನವಾದ ಸ್ವರದಲ್ಲಿ ಒಂದೊಂದು ಮಾತಾಗಿ ಹೇಳಿದ.

ದರ್ವಾನನು ಅವನು ತೋರಿಸಿದ ಸ್ಥಳದಲ್ಲಿ ನೋಡಿದಾಗ ಹಣದ ಚೀಲ ಸಿಗಲಿಲ್ಲ. ಈ ಹಜಾಮನನ್ನು ಆ ಎರಡನೇಯವನು ಮೋಸಪಡಿಸಿದ್ದಾನೆಂದು ದರ್ವಾನನಿಗೆ ಅರ್ಥವಾಯಿತು.

"ಸರಿಯಪ್ಪಾ, ನಿನ್ನ ತಿಂಡೀ ತೀರ್ಥದ ವಿಷಯಕ್ಕೆ ಚಿಂತೆ ಪಡಬೇಡ. ನಿನಗೆ ಗುಣವಾಗುವವರೆಗೆ ನಿನ್ನನ್ನು ನಾನು ನೋಡಿಕೊಳ್ಳುತ್ತೇನೆ" ಎಂದು ಹೇಳಿ, ದರ್ವಾನನು ಒಂದಿಷ್ಟು ರವೆ ಗಂಜಿ, ಮಾಡಿಸಿ ತಂದನು. ಸ್ವತಃ ಕುಡಿಯಲಿಕ್ಕೂ ತ್ರಾಣವಿಲ್ಲದ ಅಬೂಸೀರನಿಗೆ ತಾನೇ ಸಾವಕಾಶವಾಗಿ ಗಂಜಿಯನ್ನು ಕುಡಿಸಿ, ಕಂಬಳಿ ಹೊದಿಸಿ ಮಲಗಿಸಿದನು ಆ ದಯಾಳು ದರ್ವಾನ.



ಹಾಗೆ ಆ ಪುಣ್ಯಾತ್ಮನು ಎರಡು ತಿಂಗಳವರೆಗೆ ತನ್ನ ಸ್ವಂತ ಹಣವನ್ನು ಖರ್ಚುಮಾಡಿ ಅಬೂಸೀರ ನನ್ನು ಸಂರಕ್ಷಣೆ ಮಾಡಿದ. ಕಡೆಗೆ ದೈವಾನುಗ್ರಹ ದಿಂದ ಅಬೂಸೀರ್ ಗುಣಮುಖನಾಗಿ ಎದ್ದು ತಿರು ಗಾಡುವ ಹಾಗಾದ.

"ಅಲ್ಲಾನ ಅನುಗ್ರಹ ನನ್ನ ಮೇಲಿದ್ದರೆ, ನೀನು ನನಗೆ ಮಾಡಿದ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರ ಮಾಡದಿರಲಾರೆ. ಆದರೆ ನಿನ್ನ ಋಣ ಪೂರ್ತಿ ತೀರಿಸಬೇಕಾದವನು ಆ ಭಗವಂತ ನೊಬ್ಬನೇ" ಎಂದು ಅಬೂಸೀರ್ ಸತ್ರದ ದರ್ವಾನನೊಂದಿಗೆ ಹೇಳಿದ.

"ನೀನು ಬದುಕಿ ಎದ್ದದ್ದೇ ಅಲ್ಲಾನ ಅನುಗ್ರಹ ಅಂದುಕೋಪ್ಪಾ" ಎಂದ ದರ್ವಾನ.

ಅಬೂಸೀರ್ ತನ್ನ ಹಡಪದ ಪೆಟ್ಟಿಗೆ ತೆಗೆದು ಕೊಂಡು ತನ್ನ ವೃತ್ತಿ ಮಾಡಿಕೊಳ್ಳಲು ನಗರದೊಳಗೆ ಹೊರಟ. ಅಕಸ್ಮಾತ್ತಾಗಿ ಅವನು ಹೊರಟ ದಾರಿ ಅಬೂಕೀರ್ ನಡೆಯಿಸುವ ರಂಗಾರೀ ಕಾರ್ಖಾನೆಗೆ ಹೋಯಿತು. ಅಲ್ಲಿ ಆರ ಹಾಕಿರುವ ಬಣ್ಣಬಣ್ಣದ ಬಟ್ಟೆಗಳನ್ನು ಜನರು ಆಶ್ಚರ್ಯದಿಂದ ನೋಡುತ್ತ ಗುಂಪು ಗುಂಪಾಗಿ ನಿಂತಿದ್ದರು.

"ಇಷ್ಟು ಮಂದಿ ಇಲ್ಲಿ ಸೇರಿರಲು ಕಾರಣವೇನೋ? ಏನು ವಿಶೇಷ ?" ಎಂದು ಅಬೂಸೀರ್ ಅಲ್ಲಿರುವವ ರನ್ನು ವಿಚಾರಿಸಿದ.

"ಗೊತ್ತಿಲ್ಲವೆ ? ಇದು ಆಸ್ಥಾನದ ರಂಗಾರಿಗಳಾದ ಅಬೂಕೀರ್ ದೊರೆಗಳ ರಂಗಾರೀ ಕಾರ್ಖಾನೆ. ಇಲ್ಲಿ ಅವರು ಯಾರಿಗೂ ತಿಳಿಯದಂತಹ ರಹಸ್ಯ ಪ್ರಯೋಗಗಳನ್ನು ಮಾಡಿ ಬಟ್ಟೆಗಳಿಗೆ ಈ ಚಿತ್ರ ವಿಚಿತ್ರವಾದ ಬೇರೆ ಬೇರೆ ಬಣ್ಣಗಳನ್ನು ಹಾಕುತ್ತಾರೆ" ಎಂದ ಒಬ್ಬ ಮನುಷ್ಯ.

ತನ್ನ ಮಿತ್ರನು ಒಳ್ಳೆಯ ಸ್ಥಿತಿಗೆ ಬಂದಿರುವನೆಂಬು ದನ್ನು ತಿಳಿದು ಅಬೂಸೀರನ ಹೃದಯ ಸಂತೋಷ ದಿಂದ ಹಿಗ್ಗಿತು. "ದೇವರ ದಯವಿದ್ದುದರಿಂದ ಅವನು ಮೇಲೆ ಬಂದ. ನಾನು ಅವನನ್ನು ಕುರಿತು ಕೆಟ್ಟದಾಗಿ ಆಲೋಚನೆ ಮಾಡಿದ್ದು ತಪ್ಪು; ತುಂಬ ಕೆಲಸ ಅಂತ ಕಾಣುತ್ತೆ. ನನಗೆ ತಿಳಿಸಲು ಸಮಯ ಸಿಕ್ಕಿರಲಿಕ್ಕಿಲ್ಲ. ನನ್ನ ಹಣ ತೆಗೆದುಕೊಂಡದ್ದು ಕೂಡ ಬಣ್ಣಗಳನ್ನು ಕೊಂಡುಕೊಳ್ಳಲಿಕ್ಕೆ ಆಗಿರಬೇಕು. ಈಗ ನನ್ನನ್ನು ನೋಡಿದರೆ ಅವನಿಗೆಷ್ಟು ಸಂತೋಷ ವಾದೀತು ! ನಾನು ಮಾಡಿದ ಸಹಾಯಕ್ಕೆ ಹತ್ತು ಪಾಲು ನನಗೆ ಮಾಡದೆ ಬಿಡಲಾರ. ಅಲ್ಲಾ ದೊಡ್ಡವ" ಎಂದುಕೊಂಡ ಅಬೂಸೀರ್.

ಅವನು ಗುಂಪಿನ ನಡುವಿನಲ್ಲಿ ದಾರಿ ಮಾಡಿ ಕೊಳ್ಳುತ್ತಾ ಹೋಗಿ ಕಾರ್ಖಾನೆಯ ಬಾಗಿಲನ್ನು ದೂಡಿ ಒಳಕ್ಕೆ ನೋಡಿದ. ಅಬೂಕೀರ್ ಒಂದು ಎತ್ತರವಾದ ಮಂಚದ ಮೇಲೆ ಘನವಾದ ಮತ್ತೆಯ ಮೇಲೆ ಜಡಭಾವದಲ್ಲಿ ಮಲಗಿದ್ದ. ಅವನು ಧರಿಸಿದ ದುಸ್ತುಗಳು ರಾಜರು ಧರಿಸುವಂತಹವೇ. ಅವನ

ಹಿಂದಿನಿಂದ ನಾಲ್ಕು ಮಂದಿ ಕರಿಯ ಗುಲಾಮರೂ, ನಾಲ್ಕು ಮಂದಿ ಬಿಳಿಯ ಗುಲಾಮರೂ ಒಳ್ಳೆಯ ಉಡುಪುಗಳೊಂದಿಗೆ ವಿನಯದಿಂದ ನಿಂತಿದ್ದರು. ಇಬ್ಬರು ಕೆಲಸದಾಳುಗಳು ಬಣ್ಣದ ತೊಟ್ಟಿಗಳ ಹತ್ತಿರ ಕೆಲಸ ಮಾಡುತ್ತಿದ್ದರು. ಅವರು ಏನು ಮಾಡಬೇಕೆಂಬುದನ್ನು ಅಬೂಕೀರ್ ಸಂಜ್ಞೆಗಳ ಮೂಲಕ ಅವರಿಗೆ ತಿಳಿಸುತ್ತಿದ್ದ.

ಅಬೂಸೀರ್ ಸೀದಾ ಒಳಗೆ ಹೋಗಿ ತನ್ನ ಮಿತ್ರನ ಇದಿರಿನಲ್ಲಿ ನಿಂತುಕೊಂಡ. ಅವನು ತನ್ನಕಡೆಗೆ ತಿರುಗಿದಾಗ ಮಾತಾಡಿಸೋಣವೆಂದೂ, ಅವನು ತನ್ನನ್ನು ನೋಡುತ್ತಲೇ ಓಡಿ ಬಂದು ತನ್ನನ್ನು ಆಲಿಂಗಿಸುವನೆಂದೂ ಅಂದುಕೊಂಡಿದ್ದ.



ಆದರೆ ಅಬೂಕೀರ್ ಅವನನ್ನು ನೋಡಿದ ಕೂಡಲೇ ತಟಾಲ್ಲನೆ ಎದ್ದು ಕುಳಿತು, "ಕಳ್ಳ ಮಗನೇ! ನನ್ನ ಕಾರ್ಖಾನೇ ನೆರಳಿಗೆ ಸಹಾ ಬರಬೇಡವೆಂದು ಎಷ್ಟುಸಾರಿ ಹೇಳಿದ್ದೇನೆ? ನನ್ನನ್ನು ಸರ್ವನಾಶ ಮಾಡಿ ಮತ್ತೆ ನನಗೆ ಅಪಖ್ಯಾತಿ ತರಲು ಇಲ್ಲಿಗೂ ಬಂದೆಯಾ? ಎಲೋ, ಅವನನ್ನು ಹಿಡಿದು ಚೆನ್ನಾಗಿ ಹದಮಾಡಿ ಹೊರಕ್ಕೆ ದೂಡಿಬಿಡು!" ಎಂದು ಕೂಗಾಡಿದ.

ಕೂಡಲೇ ಬಿಳೀ ಗುಲಾಮರೂ ಕರೀ ಗುಲಾಮರೂ ಅಬೂಸೀರನನ್ನು ಹಿಡಿದು ಕೆಡವಿ ಮೇಲೇರಿ ಚಕಚಕ ತುಳಿದರು. ಅಬೂಕೀರ್ ದೊಣ್ಣೆಯನ್ನು ತೆಗೆದುಕೊಂಡು "ಅವನನ್ನು ಕೌಚಿ ಹಾಕಿ" ಎಂದನು. ಹಾಗೆ ಅಬೂಸೀರನ ಬೆನ್ನಿನ ಮೇಲೆ ನೂರು ಏಟುಗಳನ್ನೂ, ಮತ್ತೆ ಅಂಗಾತ ತಿರುಗಿಸಿ ಹೊಟ್ಟೆಯ ಮೇಲೆ ಮತ್ತೊಂದು ನೂರು ಪೆಟ್ಟುಗಳನ್ನೂ ಹೊಡೆದು, "ಹೋಗೋ ಕಳ್ಳಭಡವಾ! ಇನ್ನೊಮ್ಮೆ ನಿನ್ನ ಮೋರೆ ತೋರಿಸಿದರೆ, ರಾಜನಬಳಿಗೆ ಕಳುಹಿಸಿ ನಿನ್ನ ಚರ್ಮ ಸುಲಿಸಿ, ಕೋಟೆಯ ಹೊರಗೆ ಶೂಲಕ್ಕೇರಿಸಿ ಬಿಡುತ್ತೇನೆ. ಹೋಗು ಹಾಳಾಗಿ!" ಎಂದನು ಕಣ್ಣು ತಿರುಗಿಸುತ್ತಾ. ಸೇವಕರು ಅಬೂಸೀರನನ್ನು ಎಳೆದು ಹೊರಕ್ಕೆ ದೂಡಿದರು.

ಶರೀರವೂ ಮನಸ್ಸೂ ಗಾಯವಾಗಿ, ಸಂಕಟದಿಂದ ದುಃಖಿಸುತ್ತ ಅಬೂಸೀರ್ ಕಾಲೆಳೆದುಕೊಳ್ಳುತ್ತಾ ಅಲ್ಲಿಂದ ಹೊರಗೆ ಹೋದ. ಹೊರಗೆ ಕೂಡಿದ್ದ ಜನರು ಕೂಡ ಅವನನ್ನು ಬಗೆಬಗೆಯಾಗಿ ಬಯ್ದರು.

ಅವನು ತನ್ನ ಕೋಣೆಗೆ ತಿರುಗಿಬಂದು, ಚಾಪೆಯ ಮೇಲೆ ಬಿದ್ದುಕೊಂಡು ಅಬೂಸೀರನ ದುಷ್ಟಪ್ರವರ್ತನೆಯನ್ನು, ಬೆಳತನಕ ಆಲೋಚನೆ ಮಾಡಿದ. ಸಾವಕಾಶವಾಗಿ ನಿದ್ದೆ ಬಂತು.

ಮರುದಿನ ಬೆಳಗ್ಗೆ, ನೋವಿನಬಾಧೆಗೆ ಒಳ್ಳೆಯ ಸ್ನಾನಮಾಡಿದರೆ ಹಿತವಾದೀತೆನಿಸಿತು. ಅವನು ಎದ್ದು ಸ್ನಾನ ಶಾಲೆಯನ್ನು ಹುಡುಕುತ್ತಾ ನಡೆದ. ಬೀದಿಯಲ್ಲಿ ಇದಿರಾದವರ ಹತ್ತಿರ, "ಅಯ್ಯಾ, ಸ್ನಾನ ಶಾಲೆಗೆ ದಾರಿ ಹೇಗೆ?" ಎಂದು ಕೇಳಿದ. "ಸ್ನಾನ ಶಾಲೆ ಅಂದರೆ ಏನದು? ಹೊಸದಾಗಿದೆಯಲ್ಲಾ!"

ಎಂದು ಆ ಮನುಷ್ಯ ಇದಿರು ಪ್ರಶ್ನೆ ಹಾಕಿದ. ಅಬೂಸೀರ್ ಆಶ್ಚರ್ಯ ಪಡುತ್ತ, "ಸ್ನಾನ ಮಾಡಿ ಶರೀರದ ಕೊಳೆಯನ್ನು ಕಳೆದುಕೊಳ್ಳುವ ಸ್ಥಳ. ಪ್ರಪಂಚದಲ್ಲಿ ಅದಕ್ಕಿಂತ ಸುಖವಾದ ಸ್ಥಳ ಬೇರೊಂದಿಲ್ಲ. ದಣಿದವರಿಗಂತೂ ಅದು ಸ್ವರ್ಗ" ಎಂದ.

"ಅಂಥಾದ್ದಾವುದೂ ಇಲ್ಲಿ ಇಲ್ಲಯ್ಯ. ಮೈತೊಳೆಯ ಬೇಕಾದರೆ ಸಮುದ್ರಕ್ಕೆ ಹೋಗು. ಇಲ್ಲಿ ಎಲ್ಲರೂ ಸಮುದ್ರಕ್ಕೇ ಹೋಗಿ ಮೈತೊಳೆದುಕೊಳ್ಳುತ್ತಾರೆ" ಎಂದ ಆ ಮನುಷ್ಯ.

ಆ ನಗರದಲ್ಲಿರುವವರಿಗೆ ಸ್ನಾನಶಾಲೆಯ ಸೌಕರ್ಯಗಳೆಂದರೆ ಏನೆಂಬುದೇ ತಿಳಿಯದೆಂದು ಅಬೂಸೀರನಿಗೆ ಬೇಗದಲ್ಲೇ ತಿಳಿಯಿತು. ಆದರಿಂದ ಅವನಿಗೆ ಹೊಸದೊಂದು ಉತ್ಸಾಹ ಮೂಡಿದಂತಾಯಿತು. ಮಾರುದಿನವೇ ಅವನು ನೆಟ್ಟಗೆ ರಾಜಭವನಕ್ಕೆ ಹೋಗಿ, ರಾಜನ ದರ್ಶನವನ್ನು ಮಾಡಿ, "ಮಹಾ ಪ್ರಭುಗಳೆ, ನಾನೊಬ್ಬ ಪರದೇಶಿ. ವೃತ್ತಿಯಲ್ಲಿ ಹಜಾಮ. ಬರಿಯ ಹಜಾಮತಿ ಮಾತ್ರವಲ್ಲದೆ, ಅದಕ್ಕೆ ಸಂಬಂಧಿಸಿದ ಆರೋಗ್ಯ ಸೂತ್ರಗಳನ್ನೆಲ್ಲಾ ಕಲಿತಿದ್ದೇನೆ. ನೀರು ಕಾಯಿಸುತ್ತೇನೆ. ದೇಹವನ್ನು ಸೊಗಸಾಗಿ ಹಿಡಿಯುತ್ತೇನೆ. ಎಲ್ಲಿ ತಿಕ್ಕಬೇಕು. ಎಲ್ಲಿ ತಟ್ಟಬೇಕು, ಎಲ್ಲಿ ನೀವಬೇಕು, ಎಲ್ಲಿ ತಡವಬೇಕು, ಹೇಗೆ ಸ್ನಾನ ಮಾಡಬೇಕು ಎಂಬುದೆಲ್ಲಾ ನನಗೆ ಗೊತ್ತು. ಈದಿನ ನಾನು ಸ್ನಾನಶಾಲೆಗೆ ಹೋಗೋಣವೆಂದು ನೋಡಿದರೆ, ಈ ನಗರದಲ್ಲಿರುವವರಾರಿಗೂ ಸ್ನಾನಶಾಲೆ ಎಂಬ ಮಾತೇ ಗೊತ್ತಿಲ್ಲ. ಇಂತಹ ಮಹಾ ನಗರದಲ್ಲಿ ಆರೋಗ್ಯಕ್ಕೆ ಅತೀ ಅಗತ್ಯವಾದ ಸ್ನಾನಶಾಲೆ ಇಲ್ಲದಿರುವುದು ಬಹಳ ಆಶ್ಚರ್ಯ. ಸ್ನಾನಶಾಲೆಯೆಂದರೆ ಭೂಲೋಕ ಸ್ವರ್ಗವೇ. ಈ ಕೊರತೆಯನ್ನು ಹೋಗಲಾಡಿಸಿದರೆ ತಮ್ಮ ಕೀರ್ತಿ ಸುತ್ತುಮುತ್ತಲೂ ಹೆಚ್ಚುತ್ತದೆ" ಎಂದನು.

"ನೀನು ಹೇಳುವ ಈ ಸ್ನಾನಶಾಲೆ ಎಂತಹುದು? ಆ ಹೆಸರು ಕೂಡಾ ನಾನೆಂದೂ ಕೇಳಲಿಲ್ಲವಲ್ಲಾ! ಹೇಗಿರುತ್ತೆ? ವಿವರಿಸಿ ಹೇಳು" ಎಂದ ರಾಜ. ಸ್ನಾನಶಾಲೆಯ ನಿರ್ಮಾಣವೆಂದರೆ ಹೇಗಿರುತ್ತೆ,



ಅದರಲ್ಲಿ ಸ್ನಾನ ಮಾಡಿದವರಿಗೆ ಯಾವ ಯಾವ ಸದುಪಾಯಗಳಿರುತ್ತವೆ, ಮುಂತಾದವುಗಳನ್ನೆಲ್ಲಾ ಅಬೂಸೀರ್ ವಿವರಿಸಿ ಹೇಳಿದನು. ಎಲ್ಲಾ ಹೇಳಿ. "ಮಹಾಪ್ರಭುಗಳೇ, ಇದನ್ನೆಲ್ಲಾ ಬಾಯಿಯಿಂದ ಹೇಳಿ ಕೇಳಿ ಪ್ರಯೋಜನವಿಲ್ಲ. ಅನುಭವಿಸಿ ತಿಳಿಯ ಬೇಕೇ ಹೊರತು ವರ್ಣಿಸಿ ತೀರದು. ವರ್ಣಿಸಿದರೆ ಅರ್ಥ ಆಗಲಿಕ್ಕೂ ಇಲ್ಲ. ಸ್ನಾನಶಾಲೆಯೊಂದು ಇದ್ದು ಬಿಟ್ಟರೆ ಈ ನಗರಕ್ಕೆ ಯಾವ ಲೋಪವೂ ಇಲ್ಲದೆ ಹೋಗುತ್ತದೆ" ಎಂದನು.

ಈ ಮಾತು ಕೇಳಿ ರಾಜನಿಗೆ ಬಹಳ ಆನಂದ ಆಯಿತು. "ಯಾವ ತಾಯಿ ಹಡೆದ ಮಗನೋ—ನಿನಗೆ ಸ್ವಾಗತವಪ್ಪಾ!" ಎನ್ನುತ್ತ ರಾಜನು ಅಬೂಸೀರನಿಗೆ ತನ್ನ ಕೈಯಿಂದಲೇ ಶಾಲುವೆಯನ್ನು ಹೊದಿಸಿ, "ನೀನು ಹೇಗೆ ಮಾಡಲು ಹೇಳಿದರೆ ಹಾಗೆ ಮಾಡುತ್ತೇನೆ. ನೀನುಮಾತ್ರ ಬೇಗದಲ್ಲೇ ಒಂದು ಸ್ನಾನಶಾಲೆ ನಿರ್ಮಿಸಬೇಕು. ನನಗೆ ಅದರ ಆನಂದವನ್ನು ಅನುಭವಿಸಿ ತೀರಬೇಕು" ಎಂದನು.

ಅವನು ಅಬೂಸೀರನಿಗೆ ಇಬ್ಬರು ನೀಗ್ರೋಗಳನ್ನು, ಇಬ್ಬರು ಹುಡುಗರನ್ನು, ನಾಲ್ಕು ಮಂದಿ ಯುವತಿಯರನ್ನು, ಒಂದು ಕುದುರೆಯನ್ನು ಕೊಟ್ಟು ವಾಸಮಾಡಲು ದಿವ್ಯವಾದೊಂದು ಭವನವನ್ನೂ ಕೊಡಿಸಿದನು. ರಂಗಾರಿಗೆ ಕೊಟ್ಟ ವಸತಿಗಿಂತಲೂ ಹೆಚ್ಚಾಗಿಯೇ ಅಬೂಸೀರನಿಗೆ ದೊರೆತುವು. ಅಬೂಸೀರ್ ನಿರ್ಣಯ ಮಾಡಿ ಹೇಳುವ ಸ್ಥಳದಲ್ಲಿ ಸ್ನಾನಶಾಲೆಯನ್ನು ಕಟ್ಟಲು, ಮೇಸ್ತ್ರಿಗಳು, ಕಲ್ಲುಕುಟಿಗರು, ಗಾರೇಕಾರರು ಮೊದಲಾದವರನ್ನೂ ನಿಯಮಿಸಲಾಯಿತು. ಅವರನ್ನೆಲ್ಲ ಕರೆದುಕೊಂಡು ಅಬೂಸೀರ್ ನಗರದಲ್ಲೆಲ್ಲಾ ತಿರುಗಾಡಿ ತಕ್ಕ ಸ್ಥಳವನ್ನು ನಿರ್ಣಯಿಸಿದನು. ಅಲ್ಲಿ ಅವನು ಹೇಳಿದಂತೆ, ಅವನ ಪರ್ಯವೇಕ್ಷಣೆಯಲ್ಲಿ ಪ್ರಪಂಚದಲ್ಲೆಲ್ಲಿಯೂ ಇಲ್ಲದಂತಹ ಅಪೂರ್ವವಾದೊಂದು ಸ್ನಾನಶಾಲೆ ನಿರ್ಮಾಣವಾಯಿತು. ಸ್ನಾನಶಾಲೆಯೊಳಗೆ ಎಲ್ಲಿ ನೋಡಿದರೂ ಕಲಾವೈಭವದ ಶಿಲ್ಪಗಳೂ, ಹಾಲುಗಲ್ಲಿನ ಹಲಗೆಗಳ ಗೂಡುಗಳೂ ಕಾಣಿಸುತ್ತಿದ್ದುವು.





ಸ್ನಾನಶಾಲೆಯ ನಿರ್ಮಾಣವೆಲ್ಲ ಪೂರ್ತಿಯಾದ ಮೇಲೆ ಅಬೂಸೀರ್ ರಾಜನ ಬಳಿಗೆ ಹೋಗಿ, "ಮಹಾ ಪ್ರಭುಗಳೇ, ಸ್ನಾನಶಾಲೆ ತಯಾರಾಯಿತು. ಇನ್ನು ಸರಂಜಾಮುಗಳ ಏರ್ಪಾಡು ಮಾತ್ರವೇ ಉಳಿದಿದೆ" ಎಂದನು.

ಅದಕ್ಕಾಗಿ ರಾಜನು ಹತ್ತು ಸಾವಿರ ದೀನಾರಗಳನ್ನು ಮಂಜೂರು ಮಾಡಿದನು. ಅಬೂಸೀರ್ ಆ ಹಣದಿಂದ ಮೈ ಮರೆಸುವ ವಸ್ತ್ರಗಳನ್ನೂ, ಸಿಲ್ಕು ಬಟ್ಟೆಗಳು, ಸ್ನಾನದ ವುಡಿಗಳು, ಅತ್ತರು ಮೊದಲಾದ ಸುಗಂಧ ದ್ರವ್ಯಗಳನ್ನೂ ಕೊಂಡುಕೊಂಡು, ಅವುಗಳನ್ನೆಲ್ಲ ಎಲ್ಲೆಲ್ಲಿ ಇರಿಸಬೇಕೋ ಅಲ್ಲಲ್ಲಿ ಇರಿಸಿದನು.

ಈ ಏರ್ಪಾಡುಗಳೆಲ್ಲಾ ಆದ ಮೇಲೆ ಅಬೂಸೀರ್ ರಾಜನ ಬಳಿಗೆ ಹೋಗಿ, ದೇಹವನ್ನು ಹಿಡಿಯಲಿಕ್ಕೆ ಬಲಿಷ್ಠರಾದ ಹತ್ತು ಮಂದಿ ಮನುಷ್ಯರನ್ನು ಕೇಳಿದನು. ರಾಜನು ಇಪ್ಪತ್ತು ಮಂದಿ ಖಂಡಪುಷ್ಟಿಯುಳ್ಳ ಧಾಂಡಿಗ ಯುವಕರನ್ನು ಅವನೊಂದಿಗೆ ಕಳುಹಿಸಿದನು. ಅಬೂಸೀರ್ ಅವರಿಗೆ ಶರೀರವನ್ನು ಹೇಗೆ ಹಿಡಿದು ತೀಡಬೇಕೆಂಬುದನ್ನು ಹೇಳಿ ಕೊಟ್ಟನು. ತೈಲಲೇಪನ ಮಾಡಿ ಹೇಗೆ ಸ್ನಾನಮಾಡಿಸಬೇಕೆಂಬುದನ್ನೂ ಅವರಿಗೆ ತೋರಿಸಿದನು. ತಾನೇ ಅವರಿಂದ ಅದನ್ನೆಲ್ಲಾ ಮಾಡಿಸಿಕೊಂಡು ಅವರಿಗೆ ಒಳ್ಳೆಯ ತರಫೀದು ಕೊಟ್ಟನು. ಅವರ ಶಿಕ್ಷಣ ಕೂಡ ಬೇಗದಲ್ಲೇ ಮುಗಿಯಿತು.

ಅನಂತರ ಅಬೂಸೀರ್ ಸ್ನಾನ ಶಾಲೆಯನ್ನು ಪ್ರಾರಂಭಿಸಲು ಒಂದು ಒಳ್ಳೆಯ ದಿನವನ್ನು ಗೊತ್ತು ಮಾಡಿ, ಆ ವಿಷಯವನ್ನು ರಾಜನ ಮುಂದೆ ಹೋಗಿ ಬಿನ್ನವಿಸಿಕೊಂಡನು.

ಆ ದಿನ ಅಬೂಸೀರ್ ಸ್ನಾನಶಾಲೆಯ ತುಂಬ ಸುಗಂಧದ ಧೂಪಗಳನ್ನು ಎಬ್ಬಿಸಿ, ನೀರು ಕಾಯಿಸಿ, ಕೊಳಗಳಲ್ಲಿ ನೀರಿನ ನಳಗಳನ್ನು ತಿರುಗಿಸಿ ಎಲ್ಲಾ ಸಿದ್ಧಪಡಿಸಿಟ್ಟನು. ಸ್ನಾನಶಾಲೆ ಪೂರಾ ತೊಳೆಯಲ್ಪಟ್ಟು ಮುತ್ತಿನ ಹಾಗೆ ಥಳಥಳಿಸುತಿತ್ತು. ರಾಜನು ತನ್ನ ಮಂತ್ರಿ ಪರಿವಾರಗಳೊಂದಿಗೆ ಸ್ನಾನಶಾಲೆಯೊಳಗೆ ಅಡಿಯಿರಿಸಿದಾಗಲೇ ಒಂದು ಬಗೆಯ ತನ್ಮಯತೆಗೀಡಾದನು. ಮೂಗಿಗೆ ಇಡುಗಿದ ಸುವಾಸನೆ, ಸುಂದರವಾದ ನಿರ್ಮಾಣ, ನಳಗಳ ನೀರಿನಿಂದಾಗುವ ಮಂದಧ್ವನಿ ಇವೆಲ್ಲ ಅವನನ್ನು ಮುಗ್ಧಗೊಳಿಸಿದುವು.

"ಏನಪ್ಪಾ, ಇದೆಲ್ಲಾ!" ಎಂದು ಬೆರಗಾದ ರಾಜ.

"ಇದೇ ಸ್ನಾನಶಾಲೆ ಮಹಾರಾಜರೆ, ಅದರ ತಾವೀಗ ದ್ವಾರದ ಹತ್ತಿರವೇ ಇದ್ದೀರಿ" ಎಂದು ಹೇಳಿ ಅಬೂಸೀರ್, ಅವನನ್ನು ಮೊದಲನೇ ಹಜಾರದೊಳಗೆ ಕರೆದುಕೊಂಡು ಹೋಗಿ, ಒಂದು ಕಟ್ಟೆಯ ಮೇಲಕ್ಕೇರಿಸಿ, ಆತನ ಬಟ್ಟೆಗಳನ್ನು ಬಿಚ್ಚಿ, ಸೊಂಟಕ್ಕೆ ಬೈರಾಸನ್ನು ಸುತ್ತಿ, ಪಾದಗಳಿಗೆ ಮರದ ಹಾವುಗೆಗಳನ್ನು ತೊಡಿಸಿದನು. ಅಲ್ಲಿಂದ ಆತನನ್ನು ಎರಡನೇ ಹಾಲಿನೊಳಗೆ ಕರೆದೊಯ್ದು ಧಾಂಡಿಗ ಯುವಕರಿಂದ ಹದವಾಗಿ ತೈಲ ಹಚ್ಚಿಸಿ, ಮೈ ಹಿಡಿ

ದನು. ಅನಂತರ ಅವನ ಶರೀರವನ್ನು ಪರಿಮಳದ ಪುಡಿಗಳಿಂದ ತಿಕ್ಕಿಸಿ ತೊಳೆಸಿ, ಪನ್ನೀರಿನ ಕೊಳದಲ್ಲಿ ಸ್ವಲ್ಪ ಹೊತ್ತು ಕೂಡಿಸಿ, ತರುವಾಯ ಮೈ ಒರೆಸಿ, ಶರೀರಕ್ಕೆ ಜಾಜಿ ಅತ್ತರು, ಇತರ ಅತ್ತರುಗಳನ್ನು ಹಿಡಿಸಿ, ಕಾಲುಕೈಗಳ ನಖಗಳಿಗೆ ರಂಗು ಹಚ್ಚಿಸಿ, ದೇಹಕ್ಕೆಲ್ಲಾ ಮುಸಾಂಬರಿ, ಸಾಂಬ್ರಾಣಿ ಧೂಪಗಳನ್ನು ಸೊಗಸಾಗಿ ಹಾಕಿಸಿದನು.

ರಾಜನಿಗೆ ತನ್ನ ದೇಹವು ಗಾಳಿಯಲ್ಲಿ ತೇಲುತ್ತಿರುವ ಹಾಗೆ ಭಾಸವಾಯಿತು. ಚರ್ಮವು ನುಣ್ಣಗೆ ಗಚ್ಚಿನ ಹಾಗಾಗಿದೆ. ಅವನಿಗೆ ಎಂದೂ ಬಾರದಷ್ಟು ಉತ್ಸಾಹವೂ ಶಕ್ತಿಯೂ ಸಂತೃಪ್ತಿಯೂ ಬಂದಿರುವ ಹಾಗೆ ತೋರಿತು.

"ಯಾ ಅಲ್ಲಾ! ಇಂತಹ ಅನುಭವ ಎಂದಿಗೂ ಅನುಭವಿಸಿದ್ದಿಲ್ಲ. ಏನು ಸುಖ! ಇದೇನಾ ಸ್ನಾನಶಾಲೆಯೆಂದರೆ?" ಎಂದ ರಾಜ.

"ಹೌದು ಪ್ರಭುಗಳೇ" ಎಂದ ಅಬೂಸೀರ್.

"ನನ್ನ ನಗರವು ಈಗ ತಾನೇ ನಗರವೆನಿಸಿತು. ನಿನಗೇನು ಕೊಟ್ಟರೂ ಕಡಿಮೆಯೇ" ಎಂದ ರಾಜ.

ಅಬೂಸೀರ್ ಆತನಿಗೆ ಕುಡಿಯಲು ಷರ್ಬತ್ತು ಕೊಡಿಸಿ, ಕಸ್ತೂರಿಯ ವಾಸನೆ ಬರುವ ಬೈರಾಸಿನಿಂದ ಒರೆಯಿಸಿದನು.

"ಈ ಸ್ನಾನದ ಬೆಲೆ ಎಷ್ಟಾಗುತ್ತದಪ್ಪಾ? ನೀನು ಎಷ್ಟು ಬೆಲೆ ಕೇಳೋಣವೆಂದು ಮಾಡಿದ್ದಿ?" ಎಂದು ರಾಜನು ಅಬೂಸೀರನನ್ನು ನೋಡಿ ಕೇಳಿದನು.

"ತಮ್ಮ ದಯೆ ಪ್ರಭುಗಳೇ. ಅದೇ ನನ್ನ ಸಂತೋಷ" ಎಂದ ಅಬೂಸೀರ್.

"ಹಾಗಾದರೆ ಈ ಸ್ನಾನದ ಬೆಲೆ ಸಾವಿರ ದೀನಾರಗಳಾಗಿರಲೆಂದು ಹೇಳುತ್ತೇನೆ. ಅದಕ್ಕಿಂತ ಕಡಮೆಯಾಗಲು ಸಾಧ್ಯವಿಲ್ಲ" ಎಂದ ರಾಜ.

"ಕ್ಷಮಿಸಬೇಕು ಪ್ರಭುಗಳೇ. ಜನರೆಂದ ಮೇಲೆ ಧನಿಕರೂ ಇರುತ್ತಾರೆ, ಬಡವರೂ ಇರುತ್ತಾರೆ.



ಪ್ರತಿಯೊಬ್ಬರೂ ಸಾವಿರ ದೀನಾರ ಕೊಡಬೇಕೆಂದು ನಿರ್ಣಯಿಸಿದರೆ ಬೇಗದಲ್ಲೇ ಈ ಸ್ನಾನಶಾಲೆಯನ್ನು ಮುಚ್ಚಬೇಕಾಗಿ ಬರುತ್ತೆ" ಎಂದ ಅಬೂಸೀರ್.

"ಹಾಗಾದರೆ ಎಷ್ಟು ನಿರ್ಣಯಿಸಬಹುದೆಂಬುದು ನಿನ್ನ ಅಭಿಪ್ರಾಯ?" ಎಂದು ಕೇಳಿದ ರಾಜ.

"ಯಾರ ಶಕ್ತಿಗೆ, ಯಾರ ತಾಖತ್ತಿಗೆ ಎಷ್ಟು ಸಾಧ್ಯವೋ ಅಷ್ಟು ಕೊಡುತ್ತಾರೆ. ಬಡವನು ಕಡಮೆ ಕೊಡುತ್ತಾನೆ. ಸಾವಿರ ದೀನಾರಗಳೆಂದರೆ ಅದು ಮಹಾರಾಜರು ಕೊಡಬಲ್ಲಂಥಾದ್ದು. ಎಲ್ಲರೂ ಸ್ನಾನದ ಸುಖ ಅನುಭವಿಸಲಿ" ಎಂದ ಅಬೂಸೀರ್.

ಅವನ ಅಭಿಪ್ರಾಯವನ್ನು ಕೇಳಿ ರಾಜನೊಂದಿಗೆ ಬಂದವರಿಗೆಲ್ಲಾ ಬಹಳ ಹರ್ಷವಾಯಿತು. "ಇವನದು ಸರಿಯಾದ ಅಭಿಪ್ರಾಯ ಮಹಾರಾಜರೆ. ಎಲ್ಲರಿಗೂ ತಮಗಿರುವಂತಹ ಕೊಡುಗೈ ಹೇಗೆ ಬಂದೀತು?" ಎಂದು ಅವರೂ ರಾಜನೊಂದಿಗೆ ಹೇಳಿದರು. "ಅದೆಲ್ಲಾ ನಿಜವೇ ಇರಬಹುದು. ಏನಾದರೂ

ಇವನು ಎಲ್ಲಿಂದಲೋ ನಮ್ಮ ದೇಶಕ್ಕೆ ಬಂದ ಬಡವ. ಇವನನ್ನು ಸಂಪನ್ನನಾಗಿ ಮಾಡಬೇಕಾದ್ದು ನಮ್ಮ ಧರ್ಮ. ನಮ್ಮ ನಗರಕ್ಕೆ ಅದ್ಭುತವಾದ ಈ ಸ್ನಾನ ಶಾಲೆಯನ್ನು ಕೊಟ್ಟಿದ್ದಾನೆ. ನೀವೆಲ್ಲರೂ ಸಾವಿರ ದೀನಾರಗಳನ್ನು ಕೊಡಲು ಸಾಧ್ಯವಿಲ್ಲದ ಪಕ್ಷದಲ್ಲಿ ನೂರು ನೂರಾದರೂ ಕೊಡಿರಿ. ಹಾಗೆಯೇ ಒಬ್ಬಿಬ್ಬರು ಗುಲಾಮರನ್ನೂ ಕೊಡಿರಿ. ಆಮೇಲೆ ಅವನು ಕೋರಿದಂತೆ ನಿಮ್ಮ ನಿಮ್ಮ ಶಕ್ತಿಗೆ ತಕ್ಕ ಹಾಗೆ ಕೊಡುವಿರಂತೆ" ಎಂದ ರಾಜ.

ರಾಜನೊಂದಿಗೆ ನಲುವತ್ತು ಮಂದಿ ಬಂದಿದ್ದರು. ಅವರೆಲ್ಲರಿಗೂ ಸ್ನಾನವಾದ ಮೇಲೆ, ಅಬೂಸೀರ್ ತನಗೆ ದೊರಕಿದ ನಾಲ್ಕುಸಾವಿರ ದೀನಾರಗಳನ್ನೂ, ನಲುವತ್ತು ಮಂದಿ ಬಿಳೀ ಗುಲಾಮರನ್ನೂ, ನಲುವತ್ತು ನೀಗ್ರೋ ಗುಲಾಮರನ್ನೂ ನೋಡಿದನು. ಅದರ ಮೇಲೆ ರಾಜನು ಪ್ರತ್ಯೇಕವಾಗಿ ಹತ್ತುಸಾವಿರ ದೀನಾರಗಳನ್ನೂ, ಹತ್ತು ಮಂದಿ ನೀಗ್ರೋ ಮತ್ತು ಹತ್ತು ಮಂದಿ ಸ್ತ್ರೀಯರನ್ನೂ ಬಹುಮಾನ ಕೊಟ್ಟನು.

ಅಬೂಸೀರ್ ವಿನಯದಿಂದ ರಾಜನಿಗೆ ಕೃತಜ್ಞತಾಪೂರ್ವಕ ನಮಸ್ಕಾರ ಮಾಡುತ್ತ, "ಮಹಾಪ್ರಭುಗಳೇ, ಈ ಗುಲಾಮರನ್ನೂ ಸ್ತ್ರೀಯರನ್ನೂ ನಾನು ಎಲ್ಲಿ ಇಟ್ಟುಕೊಳ್ಳಲಿ?" ಎಂದು ಕೇಳಿದನು.

"ನಿನ್ನನ್ನು ಶ್ರೀಮಂತನನ್ನಾಗಿ ಮಾಡಲು ಈ ಪರಿಚಾರಕರನ್ನು ಕೊಡಿಸಿದೆ. ನೀನು ನಾಳೆ ನಿನ್ನ ದೇಶಕ್ಕೆ ಹಿಂದಿರುಗಿ ಹೋದರೆ ಇವರೆಲ್ಲಾ ನಿನಗೆ ಸೇವೆ ಮಾಡುತ್ತಾರೆ. ಇವರೆಲ್ಲಾ ನಿನ್ನದೇ ಸೊತ್ತು, ಸಂಪತ್ತು" ಎಂದ ರಾಜ.

"ಮಹಾಪ್ರಭುಗಳೇ, ಇಷ್ಟು ಮಂದಿ ಸೇವಕರು ತಮ್ಮಂತಹ ಮಹಾರಾಜರಿಗೇ ಸಲ್ಲುವುದಲ್ಲದೆ, ನನಗೆ ಪರಿಚಾರಕರ ಅಗತ್ಯವೇನೂ ಇಲ್ಲ. ನಮ್ಮದೆಲ್ಲಾ ಸದಾ ಸಂಸಾರ. ನಾನು ಇವರನ್ನೆಲ್ಲಾ ತಿಂಡೀ ಬಟ್ಟೆ ಕೊಟ್ಟು ರಕ್ಷಿಸಬೇಕಾದ ಭಾರಕ್ಕೆ ಅಶಕ್ತನಾದವನು" ಎಂದ ಅಬೂಸೀರ್.

ರಾಜನು ಬಿದ್ದುಬಿದ್ದು ನಗುತ್ತ, "ಅದೂ ನಿಜ" ಎಂದು ಆ ಗುಲಾಮರಿಗೆಲ್ಲ ತಲಾ ನೂರು ದೀನಾರಗಳ ಬೆಲೆಗೆ ತಾನೇ ಕೊಂಡುಕೊಂಡನು. ಅವನ ಆದೇಶದಂತೆ ಖಜಾನೆದಾರನು ಆ ನೂರೈವತ್ತು ಮಂದಿ ಗುಲಾಮರ ಲೆಕ್ಕದ ಹಣ ಅಬೂಸೀರನಿಗೆ ಸಂದಾಯ ಮಾಡಿಸಿದನು.

ರಾಜನು ಪರಿವಾರದೊಂದಿಗೆ ಹೊರಟುಹೋದ ಮೇಲೆ, ಅಬೂಸೀರ್ ತನ್ನ ಧನವನ್ನೆಲ್ಲಾ ಮನೆಗೆ ಸಾಗಿಸಿಕೊಂಡು ಹೋಗಿ, ದೀನಾರಗಳನ್ನೆಲ್ಲಾ ಚೀಲಗಳಲ್ಲಿ ತುಂಬಿಸಿ ಹೊಲಿದು, ಆ ಚೀಲಗಳನ್ನೆಲ್ಲಾ ಭದ್ರವಾಗಿ ಅಡಗಿಸಿಟ್ಟನು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)





# ನ್ಯಾಯದೇವತೆ

ಒಂದಾನೊಂದು ಕಾಲದಲ್ಲಿ ಚೀನಾ ದೇಶದಲ್ಲಿ ಚಾಂಗ್ ಎಂಬ ಯುವಕನಿದ್ದ. ಅವನು ತೀರ ಬಡವ. ತನ್ನ ತಂದೆ ತಾಯಿಗಳನ್ನು ಚಿಕ್ಕತನದಲ್ಲೇ ಕಳೆದುಕೊಂಡಿದ್ದ. ಹಾಗಾಗಿ ಹೊಟ್ಟೆಯಪಾಡಿಗೆ ಊರವರಿಗೆ ಚಿಲ್ಲರೆ ಪಲ್ಲರೆ ಕೆಲಸ ಮಾಡಿಕೊಡುತ್ತ ಅರೆ ಹೊಟ್ಟೆ ಮುಕ್ಕಾಲು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ತಲೆ ಮರೆಸಿಕೊಳ್ಳಲಿಕ್ಕೆ ತಂದೆ ಉಳಿಸಿಹೋದ ಒಂದು ಹಳೇ ಮನೆಮಾತ್ರ ಇತ್ತು.

ಚಾಂಗನ ಮನೆಯ ಪಕ್ಕದಲ್ಲಿ ಒಬ್ಬ ವ್ಯಾಪಾರಸ್ಥ ವಾಸವಾಗಿದ್ದ. ಅವನು ತಂದೆ ತಾಯಿಗಳಿಲ್ಲದ ಪರದೇಶಿಯಂತಹ ಚಾಂಗನನ್ನು, ತನ ಚಾಕರಿಗಾಗಿ ಇಟ್ಟುಕೊಂಡು, ಮೆಲ್ಲನೆ ಯಾವುದಾದರೊಂದು ನೆವನದಿಂದ, ಬಡ ಚಾಂಗನ ಮನೆಯನ್ನೂ ಸ್ಥಳವನ್ನೂ ವಶಪಡಿಸಿಕೊಳ್ಳಬೇಕೆಂದು ಬಹಳ ಪ್ರಯತ್ನ ಮಾಡಿದ. ಆದರೆ ಆ ವ್ಯಾಪಾರಿಯ ದುರುದ್ದೇಶವನ್ನು ಚುರುಕು ಬುದ್ಧಿಯುಳ್ಳ ಚಾಂಗ್ ಮೊದಲೇ ತಿಳಿದುಕೊಂಡಿದ್ದ. ಆದುದರಿಂದ ಚಾಂಗ್ ಅವನ ಕೈಕೆಳಗೆ ಕೆಲಸ ಮಾಡಲು ಒಪ್ಪಲೇ ಇಲ್ಲ. ವ್ಯಾಪಾರಿಯ ಉಪಾಯಗಳು ನಿರರ್ಥಕವಾದುವು.

ಚಾಂಗನ ಗೃಹದೇವತೆಯ ಹೆಸರು ಟೋಂಗೋ. ಚೀನಾದವರಿಗೆ ನ್ಯಾಯದೇವತೆಯೂ ಅವಳೇ. ಚಾಂಗ್ ಕೆಲಸಕ್ಕೆ ಹೊರಡುವ ಮೊದಲು ದಿನಾ ಟೋಂಗೋ ದೇವತೆಯ ವಿಗ್ರಹಕ್ಕೆ ನಮಸ್ಕಾರ ಮಾಡುವುದು ಅಭ್ಯಾಸವಾಗಿತ್ತು. ಅದನ್ನು ಅವನು ಎಂದೂ ಮರೆಯುತ್ತಿರಲಿಲ್ಲ.

ಚಾಂಗ್ ತಾರುಣ್ಯಕ್ಕೆ ಕಾಲಿಡುವಾಗ ಸ್ವಲ್ಪ ಮಟ್ಟಿಗೆ ಹಣ ಸೇರಿಸಿಟ್ಟಿದ್ದ. ಅಂತೆಯೇ ಚಾಂಗ್ ಯಾವಾಗಲೂ ಉತ್ಸಾಹದಿಂದಲೂ, ಆನಂದದಿಂದಲೂ ಕಾಣಿಸುತ್ತಿದ್ದ. ಅದನ್ನು ನೋಡಿ ನೆರೆಮನೆಯ ವ್ಯಾಪಾರಿಗೆ ಅಸೂಯೆಯಾಗುತ್ತಿತ್ತು. ಬಡವನಾದ ಚಾಂಗನ ಆನಂದೋತ್ಸಾಹಗಳಿಗೆ ಕಾರಣ ತಿಳಿಯಬೇಕೆಂದು ಅವನಿಗೆ ತೋರಿತು. ಅದಕ್ಕಾಗಿ ಒಂದುದಿನ ರಾತ್ರಿಯಲ್ಲಿ ಅವನು ಚಾಂಗನ ಹಳೇ ಮನೆಯ ಹಿಂದಿನ ಬದಿಗೆ ಹೋಗಿ ಕಿಟಿಕಿಯಿಂದ ಒಳಕ್ಕೆ ಹೊಂಚು ಹಾಕಿ ನೋಡಿದ. ಒಳಗಿನ ದೃಶ್ಯ ನೋಡಿ ಸ್ತಂಭಿತನಾದ.

ಚಾಂಗನ ಬದಿಯಲ್ಲಿ ದೊಡ್ಡದೊಂದು ಪೆಟ್ಟಿಗೆ ಇದ್ದಿತು. ಚಾಂಗ್ ಚಿನ್ನದ ನಾಣ್ಯಗಳನ್ನು ಎಣಿಸಿ

ಸಿ. ಯಲ್. ನಾರಾಯಣ



ಎಣಿಸಿ ಪೆಟ್ಟಿಗೆಯಲ್ಲಿ ಹಾಕುತಿದ್ದಾನೆ. ಕಡೆಗೆ ಅವನು ತನ್ನ ಜೇಬಿನಿಂದ ಕೆಲವು ಚಿಲ್ಲರೆ ನಾಣ್ಯಗಳನ್ನು ತೆಗೆದು ಪೆಟ್ಟಿಗೆಯೊಳಗೆ ಇಟ್ಟು, ಆ ಪೆಟ್ಟಿಗೆಯನ್ನು ಭೂಮಿಯ ತಗ್ಗಿನಲ್ಲಿಟ್ಟು, ಮೇಲೆ ಒಂದು ಹಲಗೆಯನ್ನು ಮುಚ್ಚಿ, ಆ ಹಲಗೆಯ ಮೇಲೆ ಟೋಂಗೋ ದೇವತೆಯ ವಿಗ್ರಹವನ್ನಿಟ್ಟು, ಒಂದು ಬದಿಯಲ್ಲಿ ಹಾಸಿಗೆ ಹಾಸಿಕೊಂಡು ಮಲಗಿದ.

ಇದನ್ನೆಲ್ಲಾ ಕಣ್ಣಾರೆ ನೋಡಿ, ವ್ಯಾಪಾರಿ ತನ್ನ ಮನೆಗೆ ಹಿಂದಿರುಗಿ ಹಾಸಿಗೆಯಲ್ಲಿ ಮಲಗಿದರೂ ಅವನಿಗೆ ನಿದ್ದೆಯೇ ಬರಲಿಲ್ಲ. "ಆ ಪೋರ ಎಷ್ಟೊಂದು ಚಿನ್ನದ ನಾಣ್ಯ ಗಂಟು ಕಟ್ಟಿದ್ದಾನೆ! ಅದನ್ನೆಲ್ಲ ಹೇಗಾದರೂ ಸ್ವಾಧೀನ ಪಡಿಸಿಕೊಳ್ಳಬೇಕು" ಎಂದುಕೊಂಡ.

ಮರುದಿನ ಚಾಂಗ್ ಕೆಲಸಕ್ಕೆ ಹೊರಟು ಹೋದಾಗ, ಕಾಯುತ್ತಾ ಇದ್ದ ವ್ಯಾಪಾರಿ ಹೇಗೋ ಚಾಂಗನ ಮನೆಯೊಳಗೆ ಹೊಕ್ಕ. ಕೋಣೆಯ ನೆಲದ ಮೇಲಿದ್ದ ದೇವತೆಯ ವಿಗ್ರಹವನ್ನು ಬದಿಗಿಟ್ಟು, ಹಲಗೆ ಎತ್ತಿ, ಹೊಂಡದೊಳಗಿದ್ದ ಪೆಟ್ಟಿಗೆಯನ್ನು ತೆರೆದು, ಅದರೊಳಗಿದ್ದ ಚಿನ್ನದ ನಾಣ್ಯಗಳನ್ನೆಲ್ಲಾ ತನ್ನ ಚೀಲದೊಳಗೆ ಹಾಕಿಕೊಂಡ. ಬಳಿಕ ಪೆಟ್ಟಿಗೆಯನ್ನು ಮುಚ್ಚಿ, ಮೇಲೆ ಹಲಗೆಯನ್ನೂ, ಅದರ ಮೇಲೆ ವಿಗ್ರಹವನ್ನೂ ಇಟ್ಟು, ಎಲ್ಲಾ ಮೊದಲಿದ್ದಂತೆಯೇ ಮಾಡಿ ಬಾಗಿಲುಹಾಕಿ ತನ್ನ ಮನೆಯೊಳಗೆ ಹೋಗಿ ಸೇರಿಕೊಂಡ.

ಆದಿನ ರಾತ್ರಿ ಚಾಂಗ್ ತನ್ನ ಮನೆಗೆ ಬಂದು ನೋಡಿದಾಗ, ತಾನು ಭದ್ರಪಡಿಸಿದ್ದ ಚಿನ್ನದ ನಾಣ್ಯಗಳು ಕಾಣಲಿಲ್ಲ; ಬಹಳ ಗಾಬರಿಯಾದನು. ಆಲೋಚನೆ ಮಾಡಿ ನೋಡಿದಾಗ ಕದ್ದುಕೊಂಡು ಹೋದವನು ತನ್ನ ಪರಿಚಯದವನೇ ಇರಬೇಕೆಂದು ತೋರಿತು. ಅದು ಯಾರಿರಬಹುದು ?

ಬೆಳಗಾಯಿತು ; ಚಾಂಗ್ ಆ ಊರಿನ ನ್ಯಾಯಾಧೀಶನಬಳಿಗೆ ಹೋಗಿ ತನ್ನ ಮನೆಯಲ್ಲಿ ನಡೆದ ಸಂಗತಿಗಳನ್ನು ಹೇಳಿ ತನ್ನ ಸೊತ್ತು ತನಗೆ ಮತ್ತೆ ಸಿಗುವ ಹಾಗೆ ಮಾಡಬೇಕೆಂದು ಬೇಡಿಕೊಂಡ.

ನೋಡೋಣವೆಂದು ನ್ಯಾಯಾಧೀಶ ಚಾಂಗನನ್ನು ಕಳುಹಿಸಿ, ಬಹಳ ಹೊತ್ತು ಅದನ್ನು ಕುರಿತು ಆಲೋಚನೆ ಮಾಡಿದಾಗ ನೆರೆಮನೆಯ ವ್ಯಾಪಾರಿಯ ಮೇಲೆ ಅನುಮಾನ ಉಂಟಾಯಿತು. ಹೇಗಾದರೂ ಆ ಕಳ್ಳನನ್ನು ಹಿಡಿಯಲೇ ಬೇಕೆಂದು ತೀರ್ಮಾನಿಸಿದ ನ್ಯಾಯಾಧೀಶ, ರಾತ್ರಿಯಲ್ಲಿ ಚಾಂಗನ ಮನೆಯ ಹತ್ತಿರ ಇನ್ನೊಬ್ಬರಿಗೆ ತಿಳಿಯದಂತೆ ಕಾವಲು ಕಾಯಲು ಒಬ್ಬ ಭಟನನ್ನು ನಿಯಮಿಸಿದ.

ಎರಡು ದಿನಗಳವರೆಗೆ ಚಾಂಗನ ಮನೆಯ ಹತ್ತಿರಕ್ಕೆ ಯಾರೂ ಸುಳಿಯಲಿಲ್ಲ. ಆದರೆ ಮೂರನೇದಿನ ರಾತ್ರಿ ನೆರೆಮನೆಯ ವ್ಯಾಪಾರಿ ಚಾಂಗನ ಮನೆಯ ಬಳಿಗೆಹೋಗಿ, ಕಿಟಕಿಯಿಂದ ಒಳಕ್ಕೆ ನೋಡುವುದನ್ನು ರಹಸ್ಯಭಟನು ನೋಡಿದ.

ಈ ಸಂಗತಿಯನ್ನು ಆ ಭಟನಿಂದ ತಿಳಿಯುತ್ತಲೇ ನ್ಯಾಯಾಧೀಶನ ಸಂದೇಹ ಗಟ್ಟಿಯಾಯಿತು.

ಅವನನ್ನು ಕಳ್ಳನೆಂಬ ಆರೋಪ ಹೊರಿಸಿ ವ್ಯಾಪಾರಿಯನ್ನು ಹಿಡಿಯುವುದೊಂದೇ ಉಳಿಯಿತು. ಆದ ಕಾರಣ ನ್ಯಾಯಾಧೀಶನು ಒಂದು ಉಪಾಯವನ್ನು ಆಲೋಚನೆ ಮಾಡಿ, ಚಾಂಗನನ್ನು ಕರೆಸಿ, ಚಾಂಗನಿಗೂ ಏನು ಮಾಡಬೇಕೆಂಬುದನ್ನು ಕುರಿತು ಹೇಳಿದ.

ನಾಲ್ಕದೇದಿನ ರಾತ್ರಿ ವ್ಯಾಪಾರಿ ಚಾಂಗನ ಮನೆಯ ಕಿಟಕಿಯಿಂದ ಹಣಿಕಿ ನೋಡಿದಾಗ, ಒಂದು ವಿಚಿತ್ರ ದೃಶ್ಯ ಅವನಿಗೆ ಕಾಣಿಸಿತು.

ಕಿಟಕಿಗೆ ಬೆನ್ನು ಹಾಕಿಕೊಂಡು ಒಬ್ಬಳು ತರುಣಿ ಕುಳಿತಿದ್ದಾಳೆ. ಚಾಂಗ್ ಮೊಣಕಾಲೂರಿ ಕುಳಿತು ಕೊಂಡು ಅವಳಿಗೆ ನಮಸ್ಕಾರ ಮಾಡುತ್ತಿದ್ದ. ಆ ತರುಣಿ ಚಾಂಗನೊಂದಿಗೆ, "ಅಪ್ಪಾ, ನಿನಗೆ ನನ್ನ ಮೇಲಿರುವ ಭಕ್ತಿ ಎಂತಹುದೆಂದು ನಾನು ಬಲ್ಲೆ. ಎಷ್ಟೋ ತಲೆಮಾರುಗಳಿಂದಲೂ ನಿನ್ನ ವಂಶದವರು ನನ್ನನ್ನು ಪೂಜಿಸುತ್ತಿದ್ದಾರೆ. ನಿನಗೆ ಬಹಳ ಘೋರ ವಾದ ಅನ್ಯಾಯವಾಗಿದೆ. ನಿನ್ನ ಸೊತ್ತನ್ನು ಅಪಹರಿಸಿದವನಾರೆಂದು ನನಗೆ ಗೊತ್ತು. ಅವನು ಕದ್ದಿರುವ ಸಾವಿರ ಚಿನ್ನದ ನಾಣ್ಯಗಳನ್ನೂ ನಿನಗೆ ಕೊಡಿಸುತ್ತೇನೆ. ಈ ಕ್ಷಣದಿಂದ ಚಿಂತಿಸಬೇಡ" ಎಂದಳು. ಈ ದೃಶ್ಯವನ್ನು ನೋಡುತ್ತಾ, ಅವಳ ಮಾತನ್ನು ಕೇಳಿದ ವ್ಯಾಪಾರಿ, "ಸಾವಿರ ನಾಣ್ಯಗಳೆ? ಅಷ್ಟಿರಲಿಲ್ಲವಲ್ಲಾ! ನೂರು ತಾನೆ? ನಾನು ಲೆಕ್ಕ ಮಾಡಿದೆನಲ್ಲಾ!" ಎಂದು ತನಗೆ ತಾನೇ ಹೇಳಿ ಕೊಳ್ಳುತ್ತ, ಬೇಗಬೇಗನೆ ತನ್ನ ಮನೆಯೊಳಗೆ ಹೋಗಿ, ತಾನು ಕದ್ದ ಚಿನ್ನದ ನಾಣ್ಯವಿರುವ ಚೀಲವನ್ನು ತೆಗೆದು ಅದರೊಳಗಿನ ನಾಣ್ಯಗಳನ್ನು ಕೆಳಗೆ ಸುರಿದು ಮತ್ತೆ ಲೆಕ್ಕಮಾಡತೊಡಗಿದ.

ಅವನು ಹಾಗೆ ಎಣಿಸಿಕೊಂಡಿರುವಾಗಲೇ ನ್ಯಾಯಾಧೀಶನು ಹತ್ತು ಮಂದಿ ಭಟರೊಂದಿಗೆ ಬಂದು ವ್ಯಾಪಾರಿಯನ್ನು ಬಂಧಿಸಿದ. ವಿಚಾರಿಸಿದಾಗ ವ್ಯಾಪಾರಿ ತಪ್ಪು ಒಪ್ಪಿಕೊಂಡ. ನ್ಯಾಯಾಧೀಶ ಅವನಿಗೆ ಮೂರು ತಿಂಗಳ ಕಾರಾಗೃಹವಾಸ ಶಿಕ್ಷೆ ವಿಧಿಸಿದ. ಚಾಂಗನ ಧನ ಚಾಂಗನಿಗೆ ಹಿಂದಿರುಗಿತು.

ಈ ಸಂಘಟನೆಯಿಂದ ನ್ಯಾಯಾಧೀಶನ ಪ್ರಭಾವ ಹೆಚ್ಚಿತು. ಟೋಂಗೋ ದೇವತೆ ನ್ಯಾಯಾಧಿಪತಿಗಳಿಗೆ ಪ್ರತ್ಯಕ್ಷಳಾಗಿ ಸಹಾಯ ಮಾಡುವಳೆಂದು ಒಂದು ನಂಬುಗೆ ಚೀನಾದಲ್ಲಿ ಇದ್ದಿತು. ಅಂತಹ ನ್ಯಾಯಾಧೀಶರನ್ನು ಯಾರೂ ನೋಡಿದವರಿಲ್ಲ. ಆದರೆ ಈ ಘಟನೆಯ ಮೂಲಕ ನ್ಯಾಯಾಧೀಶನಿಗೆ ಟೋಂಗೋ ದೇವತೆಯ ಸಹಾಯವಿರುವುದೆಂಬ ವಿಶ್ವಾಸ ಪ್ರಜೆಗಳಲ್ಲಿ ವ್ಯಾಪಿಸಿದುದರಿಂದ ಅವನ ಕಾಲದಲ್ಲಿ ಅನ್ಯಾಯಗಳು ಬಹಳಮಟ್ಟಿಗೆ ತಗ್ಗಿದುವು.



# ವೃತ್ತಿಗೆ ತಕ್ಕ ವೇಷ

ಒಂದು ಪಟ್ಟಣದಲ್ಲಿ ಒಬ್ಬ ಭಿಕ್ಷುಕನಿದ್ದ. ನಾಲ್ಕು ಬೀದಿ ತಿರುಗಾಡಿ ಭಿಕ್ಷೆ ಎತ್ತಿ ಹೊಟ್ಟೆ ಹೊರೆದು ಕೊಳ್ಳುವುದೇ ಅವನ ಜೀವನ.

ಒಂದುದಿನ ಬೀದಿಯಲ್ಲಿ ಒಬ್ಬ ದಯಾವಂತನು ಭಿಕ್ಷುಕನ ಹೀನ ಅವತಾರವನ್ನು ನೋಡಿ ಕನಿಕರಗೊಂಡು, ಒಬ್ಬ ಕ್ಷೌರಿಕನನ್ನು ಕರೆದು, ಅವನಿಗೆ ಚೆನ್ನಾಗಿ ಮುಖಕ್ಷೌರ, ತಲೆಕ್ಷೌರ ಮಾಡಿಸಿದ. ಸ್ನಾನಮಾಡಿ ಬರಲು ಹೇಳಿ, ಒಳ್ಳೆಯ ಇಸ್ತ್ರೀ ಬಟ್ಟೆಗಳನ್ನು ಅವನಿಗೆ ಕೊಟ್ಟು, ಹೊಟ್ಟೆ ತುಂಬ ಊಟ ಹಾಕಿ ಕಳುಹಿಸಿದ.

ಆದರೆ ಮರುದಿನ ಅವನು ಇಸ್ತ್ರೀ ಬಟ್ಟೆಗಳನ್ನು ಹಾಕಿಕೊಂಡು ಮನೆ ಮನೆ ಭಿಕ್ಷೆ ಎತ್ತಲು ಹೋದಾಗ, ಎಲ್ಲರೂ ಅವನನ್ನು ನೋಡಿ, "ಅಲಂಕಾರ ಮಾಡಿಕೊಂಡು ಭಿಕ್ಷೆ ಬೇಡಲು ಬಂದೆಯಾ? ನಾಚಿಕೆಯಿಲ್ಲ? ಕಾಲು ಸೊಟ್ಟೇ? ಕೈಯಿಲ್ಲವೆ? ಕೂಲಿನಾಲಿ ಮಾಡಿ ಬದುಕು, ನಡೆ!" ಎಂದು ಗದರಿಸಿ ಸುಮ್ಮನೆ ಕಳುಹಿಸಿಬಿಟ್ಟರು.

ನಡೆದ ತಪ್ಪು ಭಿಕ್ಷುಕನಿಗೆ ತಿಳಿಯಿತು. ತನ್ನ ಇಸ್ತ್ರೀ ಬಟ್ಟೆಗಳನ್ನು ತೆಗೆದು ಹಾಕಿ, ಮತ್ತೆ ಹರಕು ಚಿಂದಿಗಳನ್ನೇ ತೊಟ್ಟುಕೊಂಡ. ಮತ್ತೆ ಗಡ್ಡ ಮೀಸೆ ಹುಲುಸಾಗುವವರೆಗೂ ಭಿಕ್ಷೆಗೆ ಬಹಳ ಕಷ್ಟವೇ ಆಯಿತು.





# ಅಸಂತುಷ್ಟಿ

ಪೂರ್ವಕಾಲದಲ್ಲಿ ವಿಂಧ್ಯ ಪರ್ವತ ಪ್ರಾಂತದಲ್ಲಿ ಗಂಧರ್ವರು ವಾಸಮಾಡಿಕೊಂಡಿದ್ದಾಗ, ಕಂದರ್ಪಕ ಎಂಬ ಚಿಕ್ಕದೊಂದು ದೇಶವನ್ನು ಕುವಲಯನೆಂಬ ರಾಜನು ಪರಿಪಾಲನೆ ಮಾಡಿಕೊಂಡಿದ್ದನು. ಅವನ ದೇಶ ಚಿಕ್ಕದಾದರೂ ಅವನಿಗೆ ಪಶು ಸಂಪದವೂ ಭೂಸಂಪದವೂ ಅಗಣಿತವಾಗಿದ್ದುವು.

ಕುವಲಯ ರಾಜನು ಒಂದುದಿನ ಬೇಟೆಯಾಡಲು ಕಾಡಿಗೆ ಹೋಗಿ, ಎಲ್ಲೋ ಒಂದು ಕಡೆಯಲ್ಲಿ ಬೇಟೆಯಾಡುತ್ತಿದ್ದಾಗ, ದಿಣ್ಣೆಯಂತಹ ಒಂದು ಗುಡ್ಡದ ಮೇಲೆ ಅದ್ಭುತ ಸೌಂದರ್ಯದಿಂದ ಯುವತಿಯೊಬ್ಬಳು ಕಾಣಿಸಿದಳು.

ಅವಳನ್ನು ನೋಡಿದ ಕೂಡಲೇ ಕುವಲಯ ರಾಜನು ಮೋಹಪರವಶನಾಗಿ, ಗುಡ್ಡದಿಂದಿಳಿದು ಬರುವಂತೆ ಅವಳನ್ನು ಕರೆದನು. ಅವಳು ಬರಲಾರೆನೆಂಬ ಅರ್ಥದಲ್ಲಿ ಕೈಸನ್ನೆ ತೋರಿಸಿ ಗುಡ್ಡವನ್ನಿಳಿದು ಹೊರಟುಹೋಗ ತೊಡಗಿದಳು. ಕುವಲಯನು ಬಹುವೇಗವಾಗಿ ಗುಡ್ಡವನ್ನೇರಿ, ಅವಳು ಇಳಿದು ಹೋದ ಆಚೆಯ ಭಾಗವನ್ನೆಲ್ಲಾ ಕಣ್ಣಿಗೆ ಕಣ್ಣಿಟ್ಟು ನೋಡಿದನು. ನಾಲ್ಕು ಸುತ್ತಲೂ ತಿರುಗಾಡಿದರೂ ಅವಳ ಜಾಡು ತಿಳಿಯಲಿಲ್ಲ. ಅವಳನ್ನು ಹೇಗಾದರೂ ಕಂಡು ಒಪ್ಪಿಸಿ, ತನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳಬೇಕೆಂದು ಕುವಲಯನಿಗೆ ಬಲವಾದ ಕೋರಿಕೆಯುಂಟಾಯಿತು. ಆಕೆಯ ಧ್ಯಾನದಲ್ಲಿಯೇ ಅವನು ಮರುದಿನವೂ ಅದೇ ಜಾಗಕ್ಕೆ ಹೋದನು. ಮುಂಚಿನ ದಿನ ಕಾಣಿಸಿದ ಹೊತ್ತಿಗೆ ಅವಳು ಗುಡ್ಡದ ಮೇಲೆ ಮತ್ತೆ ಕಾಣಿಸಿದಳು. ಕೂಡಲೇ ಕುವಲಯನು ಅವಳ ಬಳಿಗೆ ಓಡಿದ. ಅವನು ಸಮೀಪಿಸುವಷ್ಟರಲ್ಲಿ ಅವಳು ಎತ್ತಲೋ ಹೊರಟು ಹೋದಳು.

"ಅವಳು ಗಂಧರ್ವಸ್ತ್ರೀಯಾಗಿರಬೇಕು. ಅವಳು ಎಂತಹ ನಿಬಂಧನೆ ಹಾಕಿದರೂ ಒಪ್ಪಿಕೊಂಡು ಅವಳನ್ನು ಮದುವೆಯಾಗಲೇಬೇಕು". ಎಂದು ನಿಶ್ಚಯಿಸಿ ಕುವಲಯನು ಮೂರನೇ ದಿನವೂ ಬೇಟೆಯ ನೆವನದಲ್ಲಿ ಅದೇ ಪ್ರಾಂತಕ್ಕೆ ಹೋದನು. ಅವಳು ಗುಡ್ಡದಲ್ಲಿ ಕಾಣಿಸಿದ್ದೇ ತಡ, ಅವಳ ಬಳಿಗೆ ಹೋದನು. ಆದರೆ ಈ ಸಾರಿ ಅವಳು ಹೊರಟು ಹೋಗದೆ ಹಾಗೇ ನಿಂತಿರುವುದನ್ನು ನೋಡಿ ಅವನಿಗೆ ಆಶ್ಚರ್ಯವೂ ಆನಂದವೂ ಆಯಿತು.

---

ಡಿ. ಸುಬ್ರಹ್ಮಣ್ಯ

---



ಅವನುಬಳಿಗೆ ಬಂದಕೂಡಲೇ, "ನನ್ನ ಹೆಸರು ಮಲಯವತಿ ; ದಿನಾ ನನ್ನ ಹಿಂದೆ ಏತಕ್ಕೆ ಬರುವಿ ?" ಎಂದು ಕೇಳಿದಳು.

"ಸುಂದರಿ, ನಿನ್ನನ್ನು ಮದುವೆಯಾಗದೇ ಹೋದರೆ ನನ್ನ ಜನ್ಮ ವ್ಯರ್ಥ. ನನ್ನೊಂದಿಗೆ ಬಂದು, ನನ್ನ ಪತ್ನಿಯಾಗಿರು. ಒಲ್ಲೆನೆನ್ನಬೇಡ" ಎಂದ ಕುವಲಯ. "ಸರಿ" ಎಂದು ಮಲಯವತಿ ಅವನೊಂದಿಗೆ ಹೊರಟಳು.

ಕುವಲಯನು ಅವಳನ್ನು ತನ್ನ ಮನೆಗೆ ಕರೆದೊಯ್ದು, ವಿವಾಹ ಮಾಡಿಕೊಂಡು ಸಂತೋಷವಾಗಿರತೊಡಗಿದನು. ಮಲಯವತಿ ಬಂದ ಮೇಲೆ ಕುವಲಯನ ಪಶು ಗಣಗಳು ಇಮ್ಮಡಿಯಾದುವು. ಭೂಮಿಯಲ್ಲಿ ಎರಡುಪಾಲು ಫಸಲು ಬಂದುವು. ಕುವಲಯನ ಸಂತೋಷಕ್ಕೆ ಪಾರವಿರಲಿಲ್ಲ. ಯಾರು ಏನು ಕೇಳಿದರೂ ಕೊಡುತ್ತಿದ್ದನು. ಆದರೆ ಅವನು ಎಷ್ಟೇ ದಾನ ಮಾಡಿದರೂ ಪ್ರಜೆಗಳು ಅಷ್ಟೇನೂ ಮೆಚ್ಚಿಕೊಳ್ಳುತ್ತಿರಲಿಲ್ಲ. "ಈ ದಾನ ಧರ್ಮಗಳು ಅವನಿಗೊಂದು ಲೆಕ್ಕವೆ ? ಇದಕ್ಕೆ ನೂರು ಪಾಲು ಆಚೆ ಬದಿಯಿಂದ ಬರುತ್ತಾ ಇರುತ್ತೆ, ಸಾಕ್ಷಾತ್ ದೇವತೆಯನ್ನು ಮದುವೆಯಾಗಿದ್ದಾನೆ. ಏನುಕಡಮೆ ?" ಎನ್ನುತಿದ್ದರು ಪ್ರಜೆಗಳು.

ಕೆಲವು ವರ್ಷಗಳು ಕಳೆದುವು. ಕುವಲಯನಿಗೆ ಜೀವಿತದ ಮೇಲೆ ಬೇಸರವೂ ಅಸಂತೃಪ್ತಿಯೂ ತೋರತೊಡಗಿತು. ತಾನು ಬಹು ದೊಡ್ಡ ಸಂಪನ್ನನೆನಿಸಿದವನು. ತನ್ನ ಮೇಲೆ ಸುತ್ತುಮುತ್ತಲಿನ ರಾಜರು ಅಸೂಯೆ ಪಡುತ್ತಿದ್ದಾರೆ. ಮಲಯವತಿ ದೇವತೆ ಎಂಬುದೆಲ್ಲಾ ಹಳೆಯ ಕತೆಯಾಗಿದೆ. ಅವಳು ಈಗಲೂ ಸುಂದರಿಯಾಗಿಯೇ ಇದ್ದಾಳೆ ನಿಜ ; ಆದರೆ ಅವಳೀಗ ದೇವತೆಯಲ್ಲ, ಮಾಮೂಲು ಸ್ತ್ರೀಯೇ.

ಕುವಲಯನು ತನ್ನೊಳಗೆ ಹೀಗೆ ಚಿಂತಿಸುತ್ತಾ ತನ್ನ ಹೊಲಗಳ ಬದಿಯಲ್ಲಿ ನಡೆಯುತ್ತಿರುವಾಗ ರಥದ ಸಪ್ಪಳ ಕೇಳಿಸಿತು. ಅವನು ತಲೆಯೆತ್ತಿ ನೋಡಿದಾಗ, ರಥದಲ್ಲಿ ಕುಳಿತುಕೊಂಡು ಅದ್ಭುತ ಸುಂದರಿಯೊಬ್ಬಳು ಸಾಗುತ್ತಿದ್ದಳು.

ಅವಳನ್ನು ನೋಡಿದ ಕೂಡಲೇ ಅವನಿಗೆ, "ಅಯ್ಯೊ! ನಾನು ಮಲಯವತಿಗೆ ಬದಲು ಇವಳನ್ನೇ ಮದುವೆಯಾಗುತ್ತಿದ್ದರೆ ಒಳ್ಳೆಯದಿತ್ತು" ಎಂದು ತೋರಿತು.

ಅವನು ಚಪ್ಪಾಳೆ ತಟ್ಟಿ ಕರೆದರೂ ಅವಳೇನೂ ತಲೆ ತಿರುಗಿಸಿ ನೋಡಲಿಲ್ಲ. ಅವಳನ್ನು ಸುಮ್ಮನೆ ಹೋಗಲು ಬಿಡದೆ ಆ ರಥದ ಹಿಂದೆಯೇ ಓಡಲು ತೊಡಗಿದನು. ಏರು ತಗ್ಗಾಗಿರುವ ಗುಡ್ಡದ ದಾರಿಯದು. ಆದರೂ ಕುವಲಯನು ಬಹು ಪ್ರಯಾಸದಿಂದ ರಥವನ್ನು ಬೆಂಬತ್ತಿದನು.

ಬಹಳ ದೂರ ಹೋದಮೇಲೆ ರಥ ನಿಂತಿತು. ರಥದಲ್ಲಿದ್ದ ಸುಂದರಿ ಕೆಳಗಿಳಿದಳು. ಕುವಲಯನು ಅವಳನ್ನು ನೋಡಿ ಬೆಪ್ಪಾದನು. ಅವಳು ಬೇರೆಯವ

ಇಲ್ಲ. ತನ್ನ ಪತ್ನಿಯಾದ ಮಲಯವತಿಯೇ. "ಮಲಯವತಿ, ನೀನೇ ಏನು? ನೀನು ಹೌದೋ ಅಲ್ಲವೋ ನೋಡಲಿಕ್ಕಾಗಿಯೇ ಇಷ್ಟು ದೂರ ನಿನ್ನ ಹಿಂದೆ ಬಂದೆ. ಎಲ್ಲಿಗೆ ಹೋಗುವೆ? ಮನೆಗೆ ಹೋಗೋಣ ನಡೆ" ಎಂದ ಕುವಲಯ.

"ಹೋಗೋಣ, ನೀವೂ ರಥ ಹತ್ತಿರಿ" ಎಂದಳು ಮಲಯವತಿ.

ಇಬ್ಬರೂ ಮನೆಗೆ ಹಿಂದಿರುಗಿದರು.

ಇದು ನಡೆದಂದಿನಿಂದ ಕುವಲಯನ ಅಸಂತುಷ್ಟಿ ಹೆಚ್ಚಾಗ ತೊಡಗಿತು. ಒಂದುದಿನ ಅವನು ಮನೆಗೆ ಬರುವಾಗ ಮಲಯವತಿ ಮನೆಯಲ್ಲಿರಲಿಲ್ಲ. ಅವಳು ತನ್ನವರ ಮನೆಗೆ ಹೊರಟುಹೋದಳೆಂದು ಸೇವಕರು ಅವನೊಡನೆ ಹೇಳಿದರು.

ಅವಳು ಹೊರಟುಹೋದ ಮೇಲೆ ಅವನಿಗಿರುವ ಹೊಲಗಳ ಪೈರು ಕಡಮೆಯಾದುವು. ಪಶುಗಳ ಮಂದೆ ಕ್ಷೀಣಿಸುತ್ತಾ ಹೋಯಿತು.

"ನನ್ನ ಒಳ್ಳೆಯ ದಿನಗಳು ಕಳೆದುಹೋದುವು. ಯಾವುದೋ ಭೂತವು ನನ್ನನ್ನು ಹಿಡಿದು ಪೀಡಿಸುತ್ತಿದೆ" ಎಂದು ಅನಿಸುತಿತ್ತು ಕುವಲಯನಿಗೆ. ಆ ಭೂತವು ಕಾಣಿಸಿದರೆ ಅದನ್ನು ಹಿಡಿದು ಹತ ಮಾಡಿಬಿಡಬೇಕು ಎಂದು ನಿಶ್ಚಯಿಸಿಕೊಂಡನು. ಕುವಲಯನು ಆ ಭೂತವನ್ನು ಹಿಡಿಯಲು ರಾತ್ರೀ ಹಗಲು ತಡಕಾಡಿ ಕೊಂಡಿದ್ದನು. ಒಂದುದಿನ ಅದು ಅವನ ಕಣ್ಣಿಗೆ ಬಿದ್ದೇಬಿತ್ತು. ಕುವಲಯನು ಅದನ್ನು ಓಡಿಸಿ ಹಿಡಿದು, ಅದರೊಂದಿಗೆ ಹೊರಳಾಡಿ ಕೆಡವಿ, ಅದರಮೇಲೆ ಹತ್ತಿ ಕುಳಿತು, ಕೊಲ್ಲಲು ಕತ್ತಿಯನ್ನು ಎತ್ತಿದನು.

ಅಷ್ಟರಲ್ಲಿ ಮೋಡಗಳ ಮರೆಯಿಂದ ಚಂದ್ರನು ಕಾಣಿಸಿದನು. ಬೆಳುದಿಂಗಳಲ್ಲಿ ಭೂತದ ಮುಖವನ್ನು ನೋಡಿ ಕುವಲಯನು ಮರಗಟ್ಟಿ ಹೋದನು. ಆ ಭೂತದ ಮುಖವು ತನ್ನ ಮುಖವೇ!

ಕುವಲಯನು ಆ ಭೂತವನ್ನು ಅಲ್ಲೇಬಿಟ್ಟು, ಕತ್ತಿಯನ್ನು ದೂರ ಬಿಸುಟು ಮನೆಗೆ ಹಿಂದಿರುಗಿದನು. ಮಲಯವತಿ ಬಾಗಿಲು ತೆರೆದಳು.

ಕುವಲಯನು ಆನಂದದಿಂದ "ಮಲಯವತೀ, ತಿರುಗಿ ಬಂದೆಯಾ?" ಎಂದನು.

"ಬಂದೆ. ನೀವು ನಿಮ್ಮೊಳಗಿನ ಅಸಂತುಷ್ಟಿಯನ್ನು ನಿರ್ಮೂಲ ಮಾಡಿದಿರಿ. ಇನ್ನು ಮೇಲೆ ನಾವು ಸುಖವಾಗಿರಬಹುದು" ಎಂದಳು ಮಲಯವತಿ.

ಅವಳು ಹೇಳಿದ ಮಾತು ನಿಜವೇ ಆಯಿತು. ಆಮೇಲೆ ಕುವಲಯನು ಅಸಂತುಷ್ಟಿಯನ್ನು ಮರೆತನು; ಶಾಂತಿ ನೆಲೆಸಿತು. ಸುಖವೂ ಸಂತೋಷವೂ ಅವನಿಗೆ ವಶವಾದುವು. ಮಲಯವತಿಯೊಂದಿಗೆ ಸುಖವಾಗಿದ್ದನು.



# ವೈದ್ಯದ ಗುಟ್ಟು

ಒಂದು ಹಳ್ಳಿಯಲ್ಲಿ ಒಬ್ಬ ವೈದ್ಯನಿದ್ದ. ವೈದ್ಯಕೀಯದಲ್ಲಿ ಸಿದ್ಧಹಸ್ತನಾದ ಅವನು ಬಡವರಿಗೆ ಉಚಿತವಾಗಿ ಔಷಧ ಕೊಟ್ಟು, ಧನಿಕರಿಂದ ಚೆನ್ನಾಗಿ ಹಣ ಪಡೆದುಕೊಳ್ಳುವನು.

ಆ ಹಳ್ಳಿಯಲ್ಲೇ ಒಬ್ಬ ಧನಿಕನಿದ್ದ. ಅವನಿಗೆ ವಿಷಮಜ್ವರ ಬಂದಿತು. ವೈದ್ಯನು ಬಂದು ನೋಡಿ, ಕೂಡಲೇ ತಕ್ಕ ಔಷಧಿ ಕೊಡದಿದ್ದರೆ ಅಪಾಯವಿದೆಯೆಂದು ಹೇಳಿದನು.

"ಔಷಧಕ್ಕೆ ಎಷ್ಟಾಗುತ್ತೆ ?" ಎಂದು ಧನಿಕನು ಕೇಳಲು, "ಸಿದ್ಧಮಾಡಿದ ಔಷಧಿ ನನ್ನ ಹತ್ತಿರವಿಲ್ಲ. ಬೇರೆಬೇರೆ ಜಿನಸುಗಳನ್ನು ಕೊಂಡು ತಯಾರಿಸಬೇಕು. ಅವುಗಳಿಗೆ ಹತ್ತು ರೂಪಾಯಿಯಾಗುತ್ತದೆ" ಎಂದ ವೈದ್ಯ.

ಇದರಲ್ಲಿ ವೈದ್ಯನ ಕೈವಾಡ ಬಹಳವಿರುತ್ತದೆಂದುಕೊಂಡು ಧನಿಕನು, "ಜಿನಸುಗಳ ಪಟ್ಟಿ ಬರೆದು ಕೊಡಿ. ತರಿಸುತ್ತೇನೆ" ಎಂದನು.

ವೈದ್ಯನು ಬರೆದುಕೊಟ್ಟ ಪಟ್ಟಿಯ ಜಿನಸುಗಳೆಲ್ಲಾ ಊರೊಳಗೆ ಸಿಗಲಿಲ್ಲ. ಒಬ್ಬ ಆಳನ್ನು ದೂರಕ್ಕೆ ಕಳುಹಿಸಿ ಆ ವಸ್ತುಗಳನ್ನು ತರಿಸಿದನು. ಜಿನಸುಗಳಿಗೆ ಹದಿನೈದು ರೂಪಾಯಿಯೂ, ತಿರುಗಾಟದ ಖರ್ಚು ಮತ್ತೊಂದು ಐದು ರೂಪಾಯಿಯೂ ಆಯಿತು.

ಜಿನಸುಗಳು ದೊರೆತ ಕೂಡಲೇ ವೈದ್ಯನು ಔಷಧ ಗುಳಿಗೆಗಳನ್ನು ಸೀಸೆಯಲ್ಲಿ ಹಾಕಿ ಧನಿಕನಿಗೆ ಕಳುಹಿಸಿದನು. ಅವುಗಳಿಂದ ರೋಗವು ವಾಸಿಯಾಯಿತು. ಆದರೆ ಹತ್ತು ರೂಪಾಯಿಯಲ್ಲಿ ಹೋಗುವುದಕ್ಕೆ ಧನಿಕನು ಇಪ್ಪತ್ತು ರೂಪಾಯಿ ಖರ್ಚು ಮಾಡಿದ.





# ಅಂಡರಾಕ್ಷಸ

ಹಿಂದೆ ಸ್ವರ್ಣಗೃಹವೆಂಬುದೊಂದು ರಾಜ್ಯವಿತ್ತು. ಅಲ್ಲಿಯ ರಾಜ ನಗರದಲ್ಲಿರುವ ಅರಮನೆಯ ಉದ್ಯಾನದಲ್ಲಿ, ಒಂದುದಿನ ಬೆಳಿಗ್ಗೆ ಯಾವುದೋ ಒಂದು ದೊಡ್ಡ ಮೊಟ್ಟೆ ಕಾಣಿಸಿತು. ತೋಟದ ಕೆಲಸಗಾರರು ಆ ವಿಚಿತ್ರ ಮೊಟ್ಟೆಯನ್ನು ನೋಡಿ, ರಾಜನಿಗೆ ಹೇಳಿದರು. ರಾಜನು ಆ ಮೊಟ್ಟೆಯನ್ನು ತರಿಸಿ ಭದ್ರಪಡಿಸಿದ. ಆ ಮೊಟ್ಟೆ ದಿನದಿಂದ ದಿನಕ್ಕೆ ದೊಡ್ಡದಾಗುತ್ತ ಬೇಗದಲ್ಲೇ ಅದರೊಳಗಿನಿಂದ ಪುಟ್ಟ ರಾಕ್ಷಸ ಹೊರಗೆ ಬಂದ.

ರಾಜನು ಅವನನ್ನು ನೋಡಿ ಮುಗ್ಧನಾಗಿ, ಅವನನ್ನು ಅಂತಃಪುರದಲ್ಲೇ ಬೆಳಸತೊಡಗಿದ. ಅವನು ದಿನಕ್ಕೆ ಎರಡು ಮೂರು ಅಂಗುಲಕ್ಕೆ ಬೆಳೆಯುತ್ತ ನೋಡನೋಡುತ್ತಿದ್ದ ಹಾಗೆ ಎಳೆಂಟು ಅಡಿಗಳಷ್ಟು ಎತ್ತರಕ್ಕೆ ಬೆಳೆದ.

ಅವನ ಹೊಟ್ಟೆಯೂ ದೊಡ್ಡದೇ. ಅವನಿಗೆ ಬೇಕಾಗುವಷ್ಟು ಆಹಾರ ಕೊಡಲು ರಾಜನೇನೋ ಸಿದ್ಧನಾಗಿದ್ದ. ಆದರೆ ಆ ರಾಕ್ಷಸ ಮನುಷ್ಯರನ್ನೇ ಕೊಂದು ತಿನ್ನಲಿಕ್ಕೂ ಪ್ರಯತ್ನಿಸ ತೊಡಗಿದ. ಅವನನ್ನು ಕಟ್ಟುಪಾಡಿನಲ್ಲಿಡಲು ರಾಜನು ಹತ್ತು ಹನ್ನೆರಡು ಮಂದಿ ಭಟರನ್ನು ಆಯುಧಗಳೊಂದಿಗೆ ಕಾವಲಿರಿಸಬೇಕಾಯಿತು. ದಿನಗಳು ಕಳೆಯುತ್ತಿದ್ದಂತೆ, ರಾಕ್ಷಸನ ಬಲ ಹೆಚ್ಚುತ್ತಿದ್ದಿತು. ಅಂತೆಯೇ ಸಾಯುಧ ಭಟರ ಸಂಖ್ಯೆಯನ್ನೂ ಹೆಚ್ಚಿಸಬೇಕಾಯಿತು.

ಕಡೆಗೆ ಅದೂ ಕಷ್ಟವೆನಿಸಿತು. ರಾಜನು ರಾಕ್ಷಸನನ್ನು ನಿರ್ಬಂಧದಲ್ಲಿಡಿಸ ಬೇಕಾಯಿತು. ಹಾಗೆ ನಿರ್ಬಂಧದಲ್ಲಿಟ್ಟುವರಿಂದ, ರಾಕ್ಷಸನಲ್ಲಿ ರಾಕ್ಷಸ ಗುಣಗಳು ಇನ್ನಷ್ಟು ಹೆಚ್ಚಾದುವು. ಅವನು ಕರ್ಕಶವಾಗಿ ಕಿರಿಚುತ್ತ, ಅಟ್ಟಹಾಸ ಮಾಡತೊಡಗಿದ.

ರಾಜನು ಅವನ ಬಳಿಗೆ ಹೋಗಿ, "ಎಲೋ ರಾಕ್ಷಸಪ್ಪಾ, ನಾನು ಮನಸ್ಸು ಮಾಡಿದರೆ ನಿನ್ನನ್ನು ಕ್ಷಣಮಾತ್ರದಲ್ಲಿ ಕೊಲ್ಲಿಸಿಬಿಡಬಹುದು. ಆದರೆ ನಿನ್ನನ್ನು ಕೊಲ್ಲಲು ನನಗೆ ಇಷ್ಟವಿಲ್ಲ. ನಿನ್ನನ್ನು ಇಷ್ಟ ಪ್ರಕಾರ ಹೋಗಲು ಬಿಟ್ಟರೆ ನೀನು ರಾಕ್ಷಸರ ರಾಜ್ಯಕ್ಕೆ ಹೊರಟು ಹೋಗಬೇಕು" ಎಂದ.

ರಾಕ್ಷಸನಿಗೆ ರಾಜನ ಮೇಲೆ ಸ್ವಲ್ಪ ಭಯ ಭಕ್ತಿ ಇದ್ದಿತು. ಅವನು ರಾಜನೊಂದಿಗೆ "ಬೇಡ, ನನ್ನನ್ನು ಎಲ್ಲಿಗೂ ಕಳಿಸಬೇಡಿ. ನಾನು ಎಲ್ಲಿಗೂ ಹೋಗಲಾರೆ. ನಿಮ್ಮ ಹತ್ತಿರವೇ ಇರುತ್ತೇನೆ" ಎಂದು ಹಟಹಿಡಿದ.

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಅವನನ್ನು ಏನುಮಾಡಬೇಕೆಂದು ರಾಜನಿಗೆ ಗೊತ್ತಾಗಲಿಲ್ಲ. ಎಲ್ಲರೂ ಆ ರಾಕ್ಷಸನಿಗೆ ಹೆದರುವವರೇ. ಆಗ ರಾಜನ ಆಸ್ಥಾನದಲ್ಲಿರುವ ಐಂದ್ರಜಾಲಿಕ ರಾಜನಿಗೆ ಒಂದು ಉಪಾಯ ಹೇಳಿದ.

ಅದರಂತೆ ರಾಜನು ರಾಕ್ಷಸನ ಬಳಿಗೆ ಮತ್ತೆ ಹೋಗಿ, "ಎಲೋ, ನಾನು ನಿನಗೊಂದು ಸಣ್ಣ ಪರೀಕ್ಷೆ ಇಡುತ್ತೇನೆ. ಅದರಲ್ಲಿ ನೀನು ಗೆದ್ದರೆ ನಿನ್ನನ್ನು ನಿರ್ಬಂಧದಿಂದ ಬಿಟ್ಟುಬಿಡುತ್ತೇನೆ. ಪರೀಕ್ಷೆಯಲ್ಲಿ ನೀನು ಸೋತುಹೋದರೆ, ನೀನು ನಮ್ಮ ದೇಶಬಿಟ್ಟು ರಾಕ್ಷಸರ ದೇಶಕ್ಕೆ ಹೊರಟುಹೋಗಬೇಕು" ಎಂದ.

"ಅದೆಂಥಾ ಪರೀಕ್ಷೆ?" ಎಂದು ಕೇಳಿದ ರಾಕ್ಷಸ.

"ಬಹಳ ಸಣ್ಣ ಪರೀಕ್ಷೆ. ಕೋಳಿ ಮೊಟ್ಟೆಯನ್ನು ಭೋಜನದ ಮೇಜಿಯ ಮೇಲೆ ನೆಟ್ಟಗೆ ನಿಲ್ಲಿಸಬೇಕು. ನೀನು ಹಾಗೆ ನಿಲ್ಲಿಸಿಬಿಟ್ಟರೆ ನಮ್ಮ ರಾಜ್ಯದಲ್ಲಿ ನೀನು ಇಷ್ಟಬಂದ ಹಾಗೆ ತಿರುಗಾಡಬಹುದು. ನಿಲ್ಲಿಸಲಾರದೆ ಹೋದರೆ ದೇಶಬಿಟ್ಟು ಹೋಗಬೇಕು. ಒಪ್ಪುವಿಯಷ್ಟೆ?" ಎಂದು ರಾಜನು ಕೇಳಿದ.

"ನಾನು ಅಸಲೇ ಅಂಡರಾಕ್ಷಸ. ಅಂಡಗಳು ನಾನು ಹೇಳಿದಂತೆ ಕೇಳುತ್ತವೆ. ಎಲ್ಲಿ ಪರೀಕ್ಷೆ ಇಡಿರಿ" ಎಂದ ರಾಕ್ಷಸ. "ಹೇಳಿದ ಮಾತು ತಪ್ಪಲಾರೆಯಷ್ಟೆ?" ಎಂದು ರಾಜನು ಸಂದೇಹದಿಂದ ಕೇಳಲು, "ಅಂಡರಾಕ್ಷಸರು ಎಂದಿಗೂ ಮಾತು ತಪ್ಪಲಾರರು!" ಎಂದ ರಾಕ್ಷಸ.

ಆಮೇಲೆ ರಾಜನ ಅಪ್ಪಣೆಯಂತೆ ಭಟರು ರಾಕ್ಷಸನನ್ನು ಬಂಧನದಿಂದ ಬಿಡುಗಡೆ ಮಾಡಿ ಭೋಜನದ ಕೋಣೆಗೆ ಕರೆದೊಯ್ದರು. ಊಟದ ಮೇಜಿಯ ಮುಂದೆ ಒಂದು ಬದಿಯಲ್ಲಿ ರಾಜನೂ ಇನ್ನೊಂದು ಬದಿಯಲ್ಲಿ ರಾಕ್ಷಸನೂ ಕುಳಿತರು. ಒಂದು ಕೋಳಿಮೊಟ್ಟೆ ತಂದು ರಾಕ್ಷಸನಿಗೆ ಕೊಟ್ಟರು. ಅದನ್ನು ಅವನು ನೆಟ್ಟಗೆ ನಿಲ್ಲಿಸಲು ಎಷ್ಟುಸಾರಿ ಪ್ರಯತ್ನ ಪಟ್ಟರೂ ಅದು ಬದಿಗೆ ಹೊರಳಿ ಹೊರಳಿ ಹೋಯಿತು.

ಕಡೆಗೆ ರಾಜನು ಆ ಮೊಟ್ಟೆಯನ್ನು ತೆಗೆದುಕೊಂಡು ತನ್ನ ಮುಂದೆ ಮೇಜಿಯ ಮೇಲೆ ನಿಲ್ಲಿಸಿ, "ನೋಡಿದೆಯಾ? ನೀನು ಪರೀಕ್ಷೆಯಲ್ಲಿ ಸೋತೆ, ಇನ್ನು ರಾಕ್ಷಸರ ದೇಶಕ್ಕೆ ಹೋಗಿಬಿಡು" ಎಂದನು.

ರಾಕ್ಷಸ ಮಾತು ತಪ್ಪದವನೇ ನಿಜ. ಅವನು ದೇಶಬಿಟ್ಟು ಹೋಗಿಬಿಟ್ಟ. ಎಲ್ಲಿ ಹೋದನೋ ಏನಾದನೋ ಯಾರಿಗೂ ತಿಳಿಯದು.

"ಕೋಳಿ ಮೊಟ್ಟೆಯನ್ನು ಹೇಗೆ ನೆಟ್ಟಗೆ ನಿಲ್ಲಿಸಿದಿರಿ?" ಎಂದು ಮಂತ್ರಿ ರಾಜನನ್ನು ಕೇಳಿದ.

ರಾಜನು ಮೇಜಿಯ ಮೇಲೆ ಹರಡಿದ ಬಟ್ಟೆಯನ್ನು ಮೇಲಕ್ಕೆತ್ತಿ ತೋರಿಸಿದ. ಆ ಮೊಟ್ಟೆಯ ಕೆಳಗೆ ಒಂದಿಷ್ಟು ಉಪ್ಪಿನ ಹರಳುಗಳು ಕಾಣಿಸಿದುವು. ಆ ಗುಂಪಿನ ಮೇಲೆ ಮೊಟ್ಟೆ ನಿಂತಿತ್ತು.





# ಪಚ್ಚೆಕಂಕಣ

ವಿಜಯನಗರದ ರಾಜಧಾನಿಯಾದ ಹಂಪೆಯಲ್ಲಿ ಹರಿಹರ ರಾಯನು ರಾಜ್ಯವಾಳಿಕೊಂಡಿರುವಾಗ. ಅವನ ಆಸ್ಥಾನದಲ್ಲಿ ಭಾಸ್ಕರನೆಂಬ ಮಂತ್ರಿ ಇದ್ದ, ಅವನು ಮಹಾ ಪ್ರತಿಭಾಶಾಲಿ. ರಾಯನು ಆತನ ಮೇಲಿನ ಗೌರವದಿಂದ ಆತನಿಗೆ ಪಚ್ಚೆ ಕಂಕಣಗಳನ್ನು ತೊಡಿಸಿ ಗೌರವಿಸಿದ್ದ.

ಮಂತ್ರಿ ಭಾಸ್ಕರನು ಪ್ರತಿದಿನ ಬೆಳಂಜಾವದಲ್ಲಿ, ತನ್ನ ಸೇವಕರನ್ನು ಕರೆದುಕೊಂಡು ತುಂಗಭದ್ರಾ ನದಿಗೆ ಹೋಗಿ, ಸ್ನಾನಮಾಡಿ, ಸಂಧ್ಯಾವಂದನೆ ತೀರಿಸಿ ಹಿಂದಿರುಗುವ ಪದ್ಧತಿ ಇಟ್ಟುಕೊಂಡಿದ್ದ.

ಒಂದುದಿನ ಬೆಳಗ್ಗೆ ಅವನು ಸ್ನಾನಮಾಡುತ್ತಾ ಇರುವಾಗ, ನದಿಯ ಸುಳಿಯಲ್ಲಿ ಸಿಕ್ಕಿ ಅವನ ಕೈಯ ಕಂಕಣವೊಂದು ಜಾರಿ ನದಿಯೊಳಗೆ ಬಿದ್ದುಹೋಯಿತು. ಅವನ ಸೇವಕರು ಕೈಯಲ್ಲಿ ಕಂಕಣವಿಲ್ಲದಿರುವುದನ್ನು ನೋಡಿ, "ಒಂದು ಕೈಯಲ್ಲಿ ಮಾತ್ರ ಬಳೆಯಿದೆ. ಇನ್ನೊಂದೇನಾಯಿತು ?" ಎಂದು ಕೇಳಿದರು.

"ನೀರಿನಲ್ಲಿ ಜಾರಿ ಬಿದ್ದುಹೋಯಿತು" ಎಂದ ಭಾಸ್ಕರ ಮಂತ್ರಿ. "ಅದು ಎಲ್ಲಿ ಬಿದ್ದುಹೋಯಿತೆಂದು ಹೇಳಿರಿ. ನಾವು ಈಗಲೇ ನದಿಯಲ್ಲಿ ಮುಳುಗಿ ಹುಡುಕಿ ಕೊಡುತ್ತೇವೆ" ಎಂದರು ಸೇವಕರು.

ಕೂಡಲೇ ಮಂತ್ರಿ ಭಾಸ್ಕರನು ತನ್ನ ಇನ್ನೊಂದು ಕೈಯಲ್ಲಿಯ ಕಂಕಣವನ್ನೂ ತೆಗೆದು ನದಿಯೊಳಗೆ ಬಿಸುಟು "ಇದು ಬಿದ್ದ ಸ್ಥಳದಲ್ಲೇ ಅದೂ ಕೂಡಾ ಇರುತ್ತೆ" ಎಂದು ಹೇಳಿ ತನ್ನ ಮನೆಗೆ ಹೋಗಿಬಿಟ್ಟ.

ಸೇವಕರು ಎಷ್ಟು ಹುಡುಕಿದರೂ ಒಂದು ಕಂಕಣ ಕೂಡಾ ಸಿಗಲಿಲ್ಲ. ಈ ವಾರ್ತೆ ಕ್ರಮವಾಗಿ ಹರಿಹರ ರಾಯನ ಅಂತರಂಗಿಕರಿಗೆ ತಿಳಿಯಿತು. ಅವರು ರಾಯನೊಂದಿಗೆ. "ಮಹಾರಾಜರೆ, ಮಂತ್ರಿಯವರಿಗೆ ನೀವು ತೋರಿಸುವ ಗೌರವದಲ್ಲಿ ನೂರೊಂದರಷ್ಟು ಕೂಡಾ ನಿಮ್ಮ ಮೇಲಿಲ್ಲ" ಎಂದು ಪ್ರಾರಂಭಿಸಿ ಕಂಕಣಗಳ ವೃತ್ತಾಂತವನ್ನು ಹೇಳಿದರು.

ರಾಯನು ಈ ಸಂಗತಿಯನ್ನು ತಿಳಿದು ತನ್ನ ಸೇವಕರ ಮೂಲಕವಾಗಿ ಕೂಡಲೇ ಭಾಸ್ಕರ ಮಂತ್ರಿಯನ್ನು ಕರೆಯಿಸಿಕೊಂಡ. ಮಂತ್ರಿಯ ಕೈಗಳಲ್ಲಿ ಕಂಕಣಗಳಿಲ್ಲದಿರುವುದು, ಕೇಳಿದ ಮಾತು ನಿಜವೆಂಬುದನ್ನು ಸಾರುತಿದ್ದಿತು.

ಆದನ್ನು ನೋಡಿ ರಾಯನು, "ಮಂತ್ರಿಯವರೆ, ನಾವು ಬಹುಮಾನವಾಗಿತ್ತ ಪಚ್ಚೆ ಕಂಕಣಗಳನ್ನು,

ಎಲ್. ನರಸಿಂಹರಾವ್

ನಮ್ಮ ಹತ್ತಿರ ಬರುವಾಗ ಕೂಡಾ ಧರಿಸಿಕೊಂಡಿದ್ದರೆ ಚೆನ್ನಾಗಿರುತ್ತದೆ" ಎಂದ.

ಅದನ್ನು ಕೇಳಿ ಭಾಸ್ಕರ ಮಂತ್ರಿ "ಮಹಾರಾಜರೆ, ತಾವು ಬಹುಮಾನವಿತ್ತ ಕಂಕಣಗಳನ್ನು ನಾನಾಗಿ ತೆಗೆಯಲಿಲ್ಲ. ನಾನು ಸ್ನಾನ ಮಾಡುವಾಗ ತನ್ನ ತಾಯಿ ಗಂಗಾ ಭವಾನಿ ಒಂದುಕೈಯ ಕಂಕಣವನ್ನು ತೆಗೆದುಕೊಂಡಳು. ಆ ತಾಯಿಯ ಒಂದೇ ಕೈಯಲ್ಲಿ ಅಂತಹ ಕಂಕಣವಿರುವುದು ಚೆನ್ನಾಗಿಲ್ಲವೆಂದೆಣಿಸಿ ಇನ್ನೊಂದು ಕೈಯ ಕಂಕಣವನ್ನೂ ಅವಳಿಗೇ ಸಮರ್ಪಿಸಿಬಿಟ್ಟೆ" ಎಂದ.

ಈ ಮಾತು ಕೇಳಿ ರಾಜನಿಗೆ ಅತ್ಯಂತ ಸಿಟ್ಟು ಬಂತು. ಆದರೆ ಮೇಲೆ ಮಾತ್ರ ಸಿಟ್ಟನ್ನು ಕಾಣಿಸದೆ "ನೀವು ಕಂಕಣ ಸಮರ್ಪಣೆ ಮಾಡಿದ ಗಂಗಾದೇವಿಯ ಕೈಗಳನ್ನು ನೋಡಬೇಕೆಂದು ನನಗೆ ಬಹಳ ಉತ್ಸಾಹ ವಾಗಿದೆ. ಅವುಗಳನ್ನು ತೋರಿಸುವಿರಾ? ಗಂಗಾ ಭವಾನಿಯನ್ನು ನೋಡುವ ಪುಣ್ಯ ನಮಗೂ ದೊರೆಯ ಬಹುದೆ!" ಎಂದು ವ್ಯಂಗ್ಯವಾಗಿ ಕೇಳಿದ.

"ಆ ದೇವಿಯ ಚಿತ್ತ. ಯಾವುದಕ್ಕೂ ನಾಳೆ ಬೆಳಿಗ್ಗೆ ನಾನು ತುಂಗಭದ್ರಾ ನದಿಯಲ್ಲಿ ಸ್ನಾನಮಾಡುವ ಸಮಯದಲ್ಲಿ ತಾವೂ ಅಲ್ಲಿಗೆ ದಯ ಮಾಡಿರಿ" ಎಂದ ಭಾಸ್ಕರ ಮಂತ್ರಿ. ಅದರಂತೆ ಮರುದಿನ ಬೆಳಿಗ್ಗೆ ಸಮಯಕ್ಕೆ ಸರಿಯಾಗಿ ರಾಯನು ಎದ್ದು ತನ್ನ ಪರಿವಾರದವರನ್ನೂ ಕರೆದುಕೊಂಡು ತುಂಗಭದ್ರಾ ನದಿಯ ತೀರಕ್ಕೆ ಹೋದ.

ಭಾಸ್ಕರ ಮಂತ್ರಿ ಸ್ನಾನಮಾಡಿ, ಗಂಗಾ ಸ್ತವನವನ್ನು ಪಠಿಸುತ್ತ, "ತಾಯೇ, ತ್ರಿಕಾಲಗಳನ್ನೂ ತಿಳಿಯ ಬಲ್ಲವಳೇ! ನಿನ್ನ ಕೈಗಳಲ್ಲಿರುವ ಪಚ್ಚೆ ಕಂಕಣಗಳನ್ನು ಧರಿಸಿರುವ ಸೌಂದರ್ಯವನ್ನು ನಮ್ಮ ರಾಯರಿಗೂ ಪರಿವಾರದವರಿಗೂ ತೋರಿಸಿ ಸಂತೋಷಪಡಿಸು!" ಎಂದು ಬೇಡಿದ.

ಕೂಡಲೇ ನದಿಯಿಂದ ಎರಡು ಕೈಗಳು ಮೇಲೆದ್ದುವು. ಅವುಗಳಲ್ಲಿ ರಾಯನು ಭಾಸ್ಕರ ಮಂತ್ರಿಗೆ ಕೊಟ್ಟ ಪಚ್ಚೆ ಕಂಕಣಗಳಿದ್ದುವು. ರಾಯನೂ ಉಳಿದವರೂ ಕೈಮುಗಿದರು. ಕೆಲವೇ ಕ್ಷಣಗಳಲ್ಲಿ ಆ ಕೈಗಳು ನೀರಿನಲ್ಲಿ ಮುಳುಗಿ ಹೋದುವು.

ಇದನ್ನು ನೋಡಿದ ಮೇಲೆ ರಾಯನಿಗೆ ಬಹಳ ನಾಚುಗೆಯಾಯಿತು. ಅವನು ಭಾಸ್ಕರ ಮಂತ್ರಿಯ ಬಳಿಯಿಂದ ಅರಮನೆಗೆ ಹೋಗಿ, ಮಂತ್ರಿಯನ್ನು ಕರೆಯಿಸಿ, ತಾನು ಆತನನ್ನು ಪರೀಕ್ಷೆ ಮಾಡಿದುದಕ್ಕೆ ಕ್ಷಮಾಪಣೆ ಕೇಳಿಕೊಂಡ.

"ರಾಜಾ, ನನ್ನಂಥ ಎಷ್ಟೋ ಮಂದಿಯನ್ನು ನೀವು ಕಾಪಾಡುತ್ತಿರುವಿರಿ. ನನಗೆ ನೀವು ಕ್ಷಮಾಪಣೆ ಕೇಳುವುದೆಂದರೇನು? ನನಗೆ ತಮ್ಮ ಅನುಗ್ರಹವಿದ್ದರೆ, ಅಷ್ಟೇ ಸಾಕು" ಎಂದ ಭಾಸ್ಕರ ಮಂತ್ರಿ.





# ಮಹಾಭಾರತ

ಪಾಂಡವರ ಅರಣ್ಯವಾಸವು ಹನ್ನೆರಡನೆಯ ವರುಷವನ್ನು ತುಂಬಿಕೊಂಡು ಬರುತ್ತಿದ್ದಾಗ, ಇಂದ್ರನಿಗೆ ಒಳ್ಳೆ ಯೋಚನೆಯಾಯಿತು.

ಅವನು ಪಾಂಡವರಿಗೆ ಒಳಿತು ಮಾಡಬೇಕೆಂಬ ಉದ್ದೇಶದಿಂದ, ಬ್ರಾಹ್ಮಣನ ರೂಪದಲ್ಲಿ ಕರ್ಣನ ಬಳಿಗೆ ಹೋಗಿ ಅವನ ಸಹಜವಾದ ಕವಚಕುಂಡಲಗಳನ್ನು ಯಾಚಿಸಬೇಕೆಂದು ನಿಶ್ಚಯಿಸಿಕೊಂಡನು. ಹಾಗೆ ಮಾಡಿದರೆ ಅವನನ್ನು ಕೊಲ್ಲಲು ಅರ್ಜುನನಿಗೆ ಸುಲಭವಾಗಬಹುದು. ಆದರೆ, ಇಂದ್ರನು ಹೀಗೆ ಮಾಡುತ್ತಾನೆಂಬ ಸಂಗತಿ ಸೂರ್ಯನಿಗೆ ಗೊತ್ತಾಯಿತು. ಸೂರ್ಯನು ಕರ್ಣನನ್ನು ಕಾಪಾಡಬೇಕೆಂಬ ಉದ್ದೇಶದಿಂದ ಕರ್ಣನಿಗೆ ಕನಸಿನಲ್ಲಿ ಕಾಣಿಸಿ, "ಕರ್ಣಾ, ನೀನು ಬ್ರಾಹ್ಮಣರಿಗೆ ಏನು ಕೇಳಿದರೂ ಕೊಟ್ಟುಬಿಡುತ್ತೀ. ಆದುದರಿಂದ ಇಂದ್ರನು ನಿನ್ನ ಬಳಿಗೆ ಬ್ರಾಹ್ಮಣ ರೂಪದಲ್ಲಿ ಬಂದು ನಿನ್ನ ಸಹಜ ಕವಚಕುಂಡಲಗಳನ್ನು ದಾನ ಕೇಳುವನು. ಬೇರೆ ಏನು ಕೇಳಿದರೂ ಕೊಡು. ಆದರೆ ಸಹಜವಾದ ಕವಚಕುಂಡಲಗಳನ್ನು ಮಾತ್ರ ಕೊಟ್ಟುಬಿಡಬೇಡ. ಅವುಗಳು ನಿನ್ನ ದೇಹದಲ್ಲಿರುವವರೆಗೆ ನಿನ್ನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಅವೆರಡು ನಿನ್ನನ್ನು ಬಿಟ್ಟುಹೋದರೆ ನಿನಗೆ ತಪ್ಪದೆ ಕೇಡು ಬರುತ್ತದೆ. ಈ ನನ್ನ ಮುನ್ನೆಚ್ಚರಿಕೆಯನ್ನು ಮರೆಯಬೇಡ" ಎಂದು ಎಚ್ಚರಿಸಿದನು.

"ದೇವಾ, ನೀನು ಸ್ವತಃ ಬಂದು ನನಗೆ ಹಿತಬೋಧೆ ಮಾಡುವುದೇ ಬಹಳ ಹೆಚ್ಚು. ಬ್ರಾಹ್ಮಣರು ಕೇಳಿದ್ದನ್ನು ಕೊಡುವನೆಂಬುದು ನನ್ನ ವ್ರತ. ಇದರ ಮೂಲಕವಾಗಿಯೇ ನನಗೆ ಖ್ಯಾತಿ ಬಂದಿದೆ. ಹಾಗಿರುವಾಗ ದೇವೇಂದ್ರನಂಥವನೇ ಬಂದು ನನ್ನ ಸಹಜ ಕವಚಕುಂಡಲಗಳನ್ನು ಕೇಳಿದರೆ ಕೊಡದೇ ಇರಲು ಸಾಧ್ಯವೆ ? ತಪ್ಪದೆ ಕೊಡುತ್ತೇನೆ. ಇದರಿಂದ ನನ್ನ ಕೀರ್ತಿ ಚೆನ್ನಾಗಿ ಬೆಳಗುತ್ತದೆ. ಪಾಂಡವರಿಗೆ ಅಪಕೀರ್ತಿಯೂ ಬರುತ್ತದೆ. ಕೀರ್ತಿ ಹೊರಟುಹೋದ ಮೇಲೆ ಬದುಕಿದ್ದು ಲಾಭವೇನಿದೆ ? ಕೀರ್ತಿಯೊಂದಿಗೆ ಸಾಯುವುದೇ ಸಂತೋಷವೆಂದು ಬಗೆಯುವವನು

## ೩೭. ಯಕ್ಷ ಪ್ರಶ್ನೆಗಳು



ನಾನು. ಆದರಿಂದ ಏನಾದರೂ ಸರಿಯೆ" ಎಂದ ಕರ್ಣ. "ಹುಚ್ಚನೇ, ಶರೀರವೇ ಹೋದ ಮೇಲೆ ಕೀರ್ತಿಯಿದ್ದು ಏನುಮಾಡುತ್ತೀ? ಅದು ಶವಾಲಂಕಾರದಂತಹುದು. ನಿನಗೂ ಅರ್ಜುನನಿಗೂ ತಪ್ಪದೆ ಯುದ್ಧ ಬರುತ್ತದೆ. ನಿನ್ನ ಶರೀರದಲ್ಲಿ ಕವಚಕುಂಡಲಗಳು ಇರುವಷ್ಟು ಕಾಲ ಅರ್ಜುನನು ಇಂದ್ರನೊಂದಿಗೆ ಕೂಡಿ ಯುದ್ಧ ಮಾಡಿದರೂ ನಿನ್ನನ್ನು ಗೆಲ್ಲಲು ಸಾಧ್ಯವಿಲ್ಲ. ಆದುದರಿಂದ ಅವುಗಳನ್ನು ಇಂದ್ರನಿಗೆ ಕೊಟ್ಟುಬಿಡಬೇಡ. ನನ್ನ ಎಚ್ಚರಿಕೆಯನ್ನು ಅಗತ್ಯವಾಗಿ ಪಾಲಿಸು" ಎಂದನು ಸೂರ್ಯ.

"ದೇವಾ, ನನ್ನನ್ನು ಕ್ಷಮಿಸು. ಬ್ರಾಹ್ಮಣರು ಬಂದು ಕೇಳಿದರೆ ಪ್ರಾಣವನ್ನಾದರೂ ಕೊಡುತ್ತೇನೆಂಬುದು ನನ್ನ ನಿಯಮ. ಈ ಕವಚಕುಂಡಲಗಳ ಸಹಾಯವಿಲ್ಲದೆಯೇ ನಾನು ಅರ್ಜುನನ್ನು ಗೆಲ್ಲಬಲ್ಲೆನು. ನನ್ನ ಹತ್ತಿರ ಪರಶುರಾಮನೂ ದ್ರೋಣನೂ ಕೊಟ್ಟಿರುವ ಅಮೋಘವಾದ ಅಸ್ತ್ರಗಳಿವೆ. ನನ್ನನ್ನು ಕೊಲ್ಲುವುದು ಸುಲಭವೇನಲ್ಲ" ಎಂದು ಕರ್ಣನು ಸೂರ್ಯನೊಂದಿಗೆ ಹೇಳಿದನು.

"ನಿನಗೆ ಅಷ್ಟೊಂದು ಹಟವಿರುವುದಾದರೆ ಹಾಗೆ ಮಾಡು. ಇಂದ್ರನ ಬಳಿಯಲ್ಲಿ ಅಮೋಘವಾದ ಒಂದು ಶಕ್ತ್ಯಾಯುಧವಿದೆ. ಅದರಿಂದ ಎಂತಹ ಪ್ರಚಂಡ ಶತ್ರುವನ್ನಾದರೂ ಕೊಲ್ಲಬಹುದು. ಅದು ಶತ್ರುವನ್ನು ಕೊಂದು ಹಿಂದಿರುಗಿ ಬರುವಂತಹುದು. ಇಂದ್ರನು ನಿನ್ನ ಕವಚಕುಂಡಲಗಳನ್ನು ಬೇಡಿದಾಗ ನೀನು ಆ ಶಕ್ತಿಯನ್ನು ಕೇಳು. ಕೊಡುತ್ತಾನೆ. ಅದರಿಂದ ನೀನು ಅರ್ಜುನನನ್ನು ಗೆಲ್ಲಲು ಶಕ್ತನಾಗುವೆ" ಎಂದ ಸೂರ್ಯ.

"ನಿನ್ನಿಷ್ಟದಂತೆಯೇ ಆಗಲಿ ದೇವಾ" ಎಂದ ಕರ್ಣ. ಸೂರ್ಯ ಅದೃಶ್ಯನಾದ.

ಈ ಹೊತ್ತಿಗೆ ಕರ್ಣನಿಗೆ ನಿದ್ದೆಯಿಂದ ಎಚ್ಚರವಾಯಿತು. ಬೆಳಗಾಗಿರುವುದನ್ನು ನೋಡಿ ಕರ್ಣನು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಇಂದ್ರನ ಬರುವಿಕೆಯನ್ನು ಇದಿರುನೋಡಲು ತೊಡಗಿದನು. ಅವನು ದಿನಾ ಮಧ್ಯಾಹ್ನದ ವೇಳೆಯಲ್ಲಿ ಸೂರ್ಯೋಪಾಸನೆ ಮಾಡಿ ಬ್ರಾಹ್ಮಣರು ಏನು ಕೇಳಿದರೂ ದಾನವಾಗಿ ಕೊಡುತ್ತಿದ್ದನು. ಈ ದಿನ ಆ ಸಮಯದಲ್ಲಿ ಇಂದ್ರನು ಬ್ರಾಹ್ಮಣ ವೇಷದಲ್ಲಿ ಅವನ ಬಳಿಗೆ ಬಂದು "ಭಿಕ್ಷಾಂ ದೇಹಿ" ಎಂದನು.

ಕರ್ಣನು ಆತನನ್ನು ತನ್ನ ಪದ್ಧತಿಯ ಪ್ರಕಾರ ಪೂಜಿಸಿ, "ಅಯ್ಯಾ, ಬ್ರಾಹ್ಮಣಾ, ನಿನಗೇನುಬೇಕು? ಸುಂದರಿಯರಾದ ಸ್ತ್ರೀಯರೆ? ಸಾರವಂತವಾದ ಭೂಮಿಯೆ? ಉತ್ತಮವಾದ ಪಶುಗಳೆ? ಏನು ಬೇಕೆಂಬುದನ್ನು ಕೇಳು" ಎಂದನು.

"ಅಪ್ಪಾ, ಕರ್ಣಾ, ನನಗೆ ಅಂತಹುದಾವುದೂ ಬೇಡ. ನಿನ್ನ ಶರೀರದಲ್ಲಿ ಸಹಜವಾಗಿರುವ ಕವಚ ಮತ್ತು ಕುಂಡಲಗಳನ್ನು ಕೊಯಿದು ಕೊಟ್ಟುಬಿಡು" ಎಂದು ಕೇಳಿದ ಇಂದ್ರ.



"ಬ್ರಾಹ್ಮಣೋತ್ತಮನೆ, ಈ ಕವಚಕುಂಡಲಗಳು ನನ್ನ ಪ್ರಾಣವನ್ನು ಕಾಪಾಡುವಂತಹವು. ಇವುಗಳ ಬದಲು ಬೇರೆ ಯಾವುದನ್ನಾದರೂ ಕೇಳು" ಎಂದು ಹೇಳಿದನು. ಹೀಗೆ ಕೇಳುವ ಆ ಬ್ರಾಹ್ಮಣನೇ ಇಂದ್ರ ನೆಂದು ಕರ್ಣನಿಗೆ ತಿಳಿಯಿತು.

"ಬೇರೆ ಏನೂ ಬೇಡ. ನಿನ್ನ ಕವಚಕುಂಡಲಗಳೇ ನನಗೆ ಬೇಕು" ಎಂದ ಇಂದ್ರ.

ಆಗ ಕರ್ಣನು ನಕ್ಕು "ನೀನು ಇಂದ್ರನೆಂದು ನಾನು ತಿಳಿದಿದ್ದೇನೆ. ನಮ್ಮಂಥವರಿಗೆ ವರಗಳನ್ನು ಕೊಡಬೇಕಾದ ನೀನು ಹೀಗೆ ಯಾಚನೆಯ ಸ್ಥಿತಿಗೆ ಇಳಿದಿರುವುದು ಏನೇನೂ ಚೆನ್ನಾಗಿಲ್ಲ. ನಿನಗೆ ನಾನು ಕವಚಕುಂಡಲಗಳನ್ನು ಕೊಟ್ಟು ಬಿಟ್ಟರೆ ಶತ್ರುಗಳಿಂದ ನಾನು ಸುಲಭವಾಗಿ ಸೋತು ಅಪಖ್ಯಾತಿಗೆ ಬೀಳುತ್ತೇನೆ. ಆದರೂ ಚಿಂತಿಲ್ಲವೆಂದು ಕವಚಕುಂಡಲಗಳನ್ನು ಕೊಡುತ್ತೇನೆ. ನನಗೆ ಸಾಯುವುದಕ್ಕಿಂತಲೂ ಕೊಟ್ಟ ಮಾತು ತಪ್ಪದ ವ್ರತಪಾಲನೆಯೇ ದೊಡ್ಡದು. ಈ ಕವಚಕುಂಡಲ ಗಳಿಗೆ ಬದಲಾಗಿ ನನಗೆ ನೀನು ನಿನ್ನ ಅಮೋಘವಾದ ಶಕ್ತಿಯನ್ನು ಕೊಡು" ಎಂದನು.

"ಸರಿ, ನನ್ನ ಶಕ್ತಿಯನ್ನು ನಿನಗೆ ಕೊಡುತ್ತೇನೆ. ಆದರೆ ನೀನು ಅದರಿಂದ ಒಬ್ಬನನ್ನು ಕೊಲ್ಲಲಿಕ್ಕೆ ಮಾತ್ರವೇ ಸಾಧ್ಯವಾಗುತ್ತದೆ. ನೀನು ಪ್ರಯೋಗಿಸಿದ ಕೂಡಲೇ ಅದು ಶತ್ರುವನ್ನು ಕೊಂದು ನನ್ನ ಬಳಿಗೆ ತಿರುಗಿ ಬರುತ್ತದೆ. ಅದಕ್ಕೆ ಅಭ್ಯಂತರವಿಲ್ಲದಿದ್ದರೆ ತೆಗೆದುಕೋ" ಎಂದನು.

"ದೇವಾ, ನನಗಿರುವ ಶತ್ರು ಒಬ್ಬನೇ. ಅವನನ್ನು ಕೊಲ್ಲುವುದೊಂದೇ ನನ್ನ ಉದ್ದೇಶ" ಎಂದ ಕರ್ಣ.

"ಅದನ್ನು ನಾನೂ ಬಲ್ಲೆ. ಈ ಶಕ್ತಿಯಿಂದ ಅರ್ಜುನನನ್ನು ಕೊಲ್ಲಬೇಕೆಂಬುದು ನಿನ್ನ ಇಚ್ಛೆ. ಆದರೆ ಕೃಷ್ಣನ ನೆರಳಿನಲ್ಲಿ ಅವನಿರುವಾಗ ಅವನನ್ನು ಕೊಲ್ಲಲು ನಿನ್ನಿಂದಾಗದು. ಅದೇನೇ ಇರಲಿ, ನಾನು ಕೊಡುವ ಶಕ್ತಿಯನ್ನು ಪ್ರಾಣಾಪಾಯ ಸಮಯದಲ್ಲಿ ನಿನ್ನ ಬಳಿಯಲ್ಲಿರುವ ಯಾವ ಅಸ್ತ್ರಶಸ್ತ್ರಗಳೂ ಉಪ ಯೋಗಕ್ಕೆ ಬಾರದಿರುವಾಗ ಮಾತ್ರ ಉಪಯೋಗಿಸು. ಅವಸರಪಟ್ಟು ಅಗತ್ಯವಿಲ್ಲದ ಸಂದರ್ಭದಲ್ಲಾಗಲೀ, ಸಾಮಾನ್ಯರ ಮೇಲಾಗಲೀ ಈ ಶಕ್ತಿಯನ್ನು ಉಪ ಯೋಗಿಸಿದರೆ ಅದು ನಿನ್ನ ಪ್ರಾಣವನ್ನೇ ತೆಗೆದು ಬಿಡುತ್ತದೆ. ಇದನ್ನೆಂದಿಗೂ ಮರೆಯಬೇಡ" ಎಂದು ಇಂದ್ರನು ಎಚ್ಚರಿಕೆ ಹೇಳಿದನು.

ಕರ್ಣನು ತನ್ನ ಶರೀರದಲ್ಲಿ ಹುಟ್ಟಿ ಬೆಳೆದ ಕವಚ ಕುಂಡಲಗಳನ್ನು ಕೊಯಿದುಕೊಡುವಾಗ ತನಗೆ ವಿಕೃತ ರೂಪ ಉಂಟಾಗದಂತೆ ವರ ಕೊಡಬೇಕೆಂದು ಕೇಳಿ ದನು. ಇಂದ್ರನು ಹಾಗೆಯೇ ಆಗಲೆಂದನು.

ಅನಂತರ ಕರ್ಣನು ಇಂದ್ರನು ಕೊಟ್ಟ ಶಕ್ತಿಯನ್ನು ತಾನು ಗ್ರಹಿಸಿ, ಅವನಿಗೆ ತನ್ನ ಶರೀರದಲ್ಲಿದ್ದ ಸಹಜ ಕವಚಕುಂಡಲಗಳನ್ನು ಕೊಯಿದು ಕೊಟ್ಟುಬಿಟ್ಟನು. ಕರ್ಣನ ಕವಚಕುಂಡಲಗಳು ಹೊರಟುಹೋದು



ವೆಂಬ ಸಮಾಚಾರವನ್ನು ತಿಳಿದು ಪಾಂಡವರಿಗೆ ಸಂತೋಷವೂ ಕೌರವರಿಗೆ ದುಃಖವೂ ಉಂಟಾಯಿತು.

ಪಾಂಡವರು ದ್ವೈತವನದಲ್ಲಿರುವಾಗ, ಒಂದುದಿನ ಒಬ್ಬ ಬ್ರಾಹ್ಮಣನು ಬಹಳ ವೇಗದಿಂದ ಓಡುತ್ತಾ ಅವರಬಳಿಗೆ ಬಂದು, "ನಾನು ಮರದ ಕೊಂಬೆಗೆ ನನ್ನ ಅರಣಿಯನ್ನು ಸಿಕ್ಕಿಸಿಟ್ಟಿದ್ದೆ. ಒಂದು ಜಿಂಕೆ ಬಂದು ಆ ಮರಕ್ಕೆ ತನ್ನ ಶರೀರವನ್ನು ಉಜ್ಜುತ್ತಾ ಇರುವಾಗ ಅರಣಿ ಅದರ ಕೊಂಬಿಗೆ ಸಿಕ್ಕಿಕೊಂಡಿತು. ನಾನು ಸಮೀಪ ಹೋಗುವಾದ ಅದು ಅರಣಿಯೊಂದಿಗೆ ಓಡಿಹೋಯಿತು. ಅದನ್ನು ಬೆನ್ನಟ್ಟಿ ಹಿಡಿಯಲು ನನಗೆ ಸಾಧ್ಯವಿಲ್ಲ. ಅರಣಿ ಇಲ್ಲದೆ ನನ್ನ ಅಗ್ನಿ ಕಾರ್ಯ ಸಾಗುವಂತಿಲ್ಲ. ದಯಮಾಡಿ ನೀವಾದರೂ ನನ್ನ ಅರಣಿಯನ್ನು ನನಗೆ ತಂದು ಕೊಡುವಿರಾ ?" ಎಂದು ಕೇಳಿಕೊಂಡನು.

ಕೂಡಲೇ ಪಾಂಡವರು ಆ ಜಿಂಕೆ ಹೋದ ದಿಕ್ಕಿಗೆ ಓಡಿದರು. ಅದು ಕಾಣಿಸಲು ತೊಡಗಿದಾಗ ಬಾಣದಿಂದ ಅದನ್ನು ಹೊಡೆಯಲು ನೋಡಿದರು. ಆದರೆ ಅವರು ಪ್ರಯೋಗಿಸಿದ ಒಂದು ಬಾಣ ಕೂಡಾ ಆ ಜಿಂಕೆಗೆ ತಾಗಲಿಲ್ಲ. ಅದರ ಮೇಲೆ ಅದು ಬಹು ವೇಗವಾಗಿ ಓಡುತ್ತ, ನಿಮಿಷ ನಿಮಿಷಕ್ಕೂ ಅವರಿಗೆ ಆಶ್ಚರ್ಯವೆನಿಸುವಂತೆ ದೂರವಾಗುತ್ತ, ಕಡೆಗೆ ನಿಬಿಡವಾದ ಅರಣ್ಯದೊಳಗೆ ಹೊಕ್ಕು ಎತ್ತಲೋ ತಿರುಗಿ ಮಾಯವಾಗಿ ಹೋಯಿತು.

ಅಷ್ಟುಹೊತ್ತಿಗೆ ಪಾಂಡವರೈವರೂ ಬಹಳ ದಣಿದಿದ್ದರು. ಅವರು ಹಸಿವೆಯಿಂದಲೂ ದಾಹದಿಂದಲೂ ಬಾಧೆ ಪಡುತ್ತ ಒಂದು ಮರದ ನೆರಳಿನಲ್ಲಿ ಕುಳಿತರು. ಆಗ ನಕುಲನು ನಿಟ್ಟುಸಿರುಬಿಟ್ಟು, "ನಮಗೆ ಇಂತಹ ಕಷ್ಟಗಳು ಬರುವುದಕ್ಕೆ ಏನು ಕಾರಣವಿದ್ದೀತು ?" ಎಂದು ಧರ್ಮರಾಜನನ್ನು ನೋಡಿದನು.

"ಪೂರ್ವ ಜನ್ಮದಲ್ಲಿ ಮಾಡಿದ ದುಷ್ಕೃತ್ಯಗಳಿಂದ ಈ ಜನ್ಮದಲ್ಲಿ ಕಷ್ಟಗಳು ಬರುತ್ತವೆಂದು ತಿಳಿಯಬೇಕು" ಎಂದ ಧರ್ಮರಾಜ.

"ಆ ದಿನ ದ್ರೌಪದಿಯನ್ನು ಸಭೆಗೆ ಎಳೆದು ತಂದಾಗಲೇ ನಾನು ಆ ದುಷ್ಟರನ್ನೆಲ್ಲಾ ಕೊಲ್ಲದೆ ಬಿಟ್ಟದ್ದರಿಂದಲೇ ನಾವೆಲ್ಲಾ ಹೀಗೆ ಕಷ್ಟದಲ್ಲಿ ತೊಳಲಾಡಬೇಕಾಗಿದೆ" ಎಂದ ಭೀಮ.

"ಜೂಜಾಟದ ಸಮಯದಲ್ಲಿ ಕರ್ಣನು ಬೊಗಳಿದ ಮಾತುಗಳನ್ನು ನಾನು ಶಾಂತ ರೀತಿಯಲ್ಲಿ ಸಹಿಸಿಕೊಂಡಿದ್ದುದರಿಂದ ನಾವು ಅಪ್ರಯೋಜಕರಾಗಿ ಅರಣ್ಯ ಸೇರಿದೆವು. ನಾನಾ ಬಗೆಯ ಕಷ್ಟಗಳನ್ನು ಅನುಭವಿಸುತ್ತೇವೆ" ಎಂದ ಅರ್ಜುನ.

"ಆ ದುಷ್ಟ ಶಕುನಿಯನ್ನು ಎಂದೋ ಕೊಂದು ಬಿಟ್ಟಿದ್ದರೆ ನಮಗೆ ಯಾವ ತೊಂದರೆಯೂ ಬರುತ್ತಿದ್ದಿಲ್ಲ" ಎಂದ ಸಹದೇವ.

ಧರ್ಮರಾಜನು ನಕುಲನನ್ನು ನೋಡಿ, "ಮಾತಿನಿಂದ ದಾಹವು ಹೆಚ್ಚಾಗುವುದೇ ಹೊರತು ಪ್ರಯೋಜನವೇನಿಲ್ಲ. ನಕುಲಾ, ನಾವೆಲ್ಲಾ ತುಂಬಾ ಬಾಯಾ



ರಿದ್ದೇವೆ. ಈ ಮರದ ಮೇಲೆ ಹತ್ತಿ ಸಮೀಪದಲ್ಲೆಲ್ಲಿಯಾದರೂ ಕುಡಿಯಲು ತಕ್ಕದಾದ ನೀರು ಕಾಣಿಸುವುದೋ ನೋಡು, ನೀರು ಕಂಡರೆ ನಮ್ಮ ಬತ್ತಳಿಕೆಯಲ್ಲಿಷ್ಟು ನೀರು ತುಂಬಿಸಿಕೊಂಡು ಬಾ ಹೋಗು " ಎಂದನು.

ನಕುಲನು ಮರದ ಮೇಲೆ ಹತ್ತಿ ಪರೀಕ್ಷಿಸಿ, ಸಮೀಪದಲ್ಲಿ ನೀರಿರುವ ಸೂಚನೆಯನ್ನು ತಿಳಿದುಕೊಂಡು, ಅಲ್ಲಿಗೆ ಹೋದನು. ಆ ಸ್ಥಳದಲ್ಲಿ ಒಂದು ತಿಳಿನೀರಿನ ಸರೋವರವಿದ್ದಿತು. ಮೊದಲು ತಾನು ನೀರು ಕುಡಿದು, ಉಳಿದವರಿಗೆ ತೆಗೆದುಕೊಂಡು ಹೋಗೋಣವೆಂದುಕೊಂಡು, ಅವನು ನೀರಿಗಿಳಿದನು. ಆಗ ಒಂದು ಅಶರೀರವಾಣಿ, " ನಿಲ್ಲು. ನಾನು ಕೇಳುವ ಪ್ರಶ್ನೆಗಳಿಗೆ ತಕ್ಕ ಉತ್ತರ ಕೊಟ್ಟು, ನೀರು ಕುಡಿ. ಈ ಸರೋವರ ನನ್ನದು " ಎಂದಿತು.

ನಕುಲನು ಆ ಮಾತುಗಳನ್ನು ಲಕ್ಷ್ಯಮಾಡದೆ ನೀರು ಕುಡಿದು ಮೂರ್ಛೆ ಹೋಗಿ ಬಿದ್ದನು.

ಅವನು ಎಷ್ಟು ಹೊತ್ತಾದರೂ ಹಿಂದಿರುಗದಿರುವುದನ್ನು ನೋಡಿ ಧರ್ಮರಾಜನು ಸಹದೇವನನ್ನು ನಕುಲನು ಹೋದ ಕಡೆಗೆ ಕಳುಹಿಸಿದನು.

ಸಹದೇವನು ಕೂಡಾ ಸರೋವರದ ಬಳಿಗೆ ಬಂದು, ಸತ್ತಂತೆ ಬಿದ್ದಿರುವ ನಕುಲನನ್ನು ನೋಡಿ, ದಾಹವನ್ನು ತಾಳಲಾರದೆ, ಅಶರೀರವಾಣಿಯ ಮಾತುಗಳನ್ನು ಅಲಕ್ಷ್ಯ ಮಾಡಿ ನೀರಿಗಿಳಿದು ತಾನು ಕೂಡಾ ತಲೆತಿರುಗಿ ಬಿದ್ದುಬಿಟ್ಟನು.

ತರುವಾಯ ಧರ್ಮರಾಜನು ಹೋದವರ ಗತಿ ಏನಾಯಿತೆಂದು ನೋಡಿಕೊಂಡು ಬರುವಂತೆ ಅರ್ಜುನನನ್ನು ಕಳುಹಿಸಿದನು.

ಅರ್ಜುನನು ಸರೋವರವನ್ನು ತಲುಪಿ, ಅಲ್ಲಿ ಬಿದ್ದಿರುವ ತಮ್ಮಂದಿರನ್ನು ನೋಡಿದನು. ಅವರಿಗೆ ಯಾರಿಂದ ಇಂತಹ ಗತಿ ಪ್ರಾಪ್ತವಾಯಿತೆಂದು ಸುತ್ತಲೂ ನೋಡಿದನು. ಒಂದು ಹಕ್ಕಿ ಕೂಡಾ ಕಾಣಿಸಲಿಲ್ಲ. ಆಶ್ಚರ್ಯಪಡುತ್ತ ನೀರನ್ನು ನೋಡಿದಾಗ ದಾಹ ಬಾಧೆ ತಾಳಲಾರದಂತಾಗಲು ನೀರು ಕುಡಿಯಲು ಸರೋವರಕ್ಕಿಳಿದನು. ಆಗ ಅದೇ ಅಶರೀರವಾಣಿ ಅವನ ಕಿವಿಗೂ ಬಿದ್ದಿತು.

" ಸಾಮರ್ಥ್ಯವಿದ್ದರೆ ನನ್ನ ಎದುರಿಗೆ ಬಂದು ನಿಲ್ಲು. ಅದೃಶ್ಯವಾಗಿದ್ದು ಮಾತಾಡುವಿಯೇಕೆ ? " ಎನ್ನುತ್ತ ಅರ್ಜುನನು ಶಬ್ದ ಕೇಳಿ ಬಂದ ದಿಕ್ಕಿಗೆ ಬಾಣ ಪ್ರಯೋಗ ಮಾಡಿ, ನೀರು ಕುಡಿದು ಮೂರ್ಛೆ ಹೋಗಿ ಬಿದ್ದುಬಿಟ್ಟನು.

ಆಮೇಲೆ ಭೀಮನು ಬಂದು ಮೊದಲಿನವರ ಹಾಗೆಯೇ ಅಶರೀರವಾಣಿಯನ್ನು ಅಲಕ್ಷ್ಯ ಮಾಡಿ ನೀರು ಕುಡಿದು ತಾನೂ ಮೂರ್ಛೆ ಹೋಗಿ ಬಿದ್ದನು.

ಕಡೆಗೆ ಧರ್ಮರಾಜನು ಸ್ವತಃ ಹೊರಟು ಸರೋವರದಬಳಿಗೆ ಬಂದು, ಜೀವವಿಲ್ಲದೆ ಬಿದ್ದಂತಿರುವ ತಮ್ಮಂದಿರನ್ನು ನೋಡಿ ಬಹಳ ದುಃಖಿಸಿದನು.

ಆಗ ಅಶರೀರವಾಕ್ಕು ಅವನನ್ನು ಕುರಿತು ಹೀಗೆಂದಿತು: "ನಾನೊಂದು ಕೊಕ್ಕರೆ. ನಾನು ಈ ಸರೋವರದ ಮೀನುಗಳನ್ನು ತಿಂದು ಜೀವಿಸುತ್ತೇನೆ. ನನ್ನ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಕೊಡಲಾರದೆ ಅಲಕ್ಷ್ಯ ಮಾಡಿ ನೀರು ಕುಡಿದುದರಿಂದ ನಿನ್ನ ತಮ್ಮಂದಿರನ್ನು ಕೊಂದು ಹಾಕಿದೆ. ನೀನಾದರೂ ನನ್ನ ಪ್ರಶ್ನೆಗಳಿಗೆ ತಕ್ಕ ಸಮಾಧಾನ ಹೇಳಿ ನಿನಗೆ ಬೇಕಾದಷ್ಟು ನೀರು ಕುಡಿದುಕೋ. ಇಲ್ಲದಿದ್ದರೆ ನಿನಗೆ ಕೂಡಾ ಅವರ ಗತಿಯೇ ಬರುತ್ತದೆ."

ಈ ಮಾತುಗಳನ್ನು ಕೇಳಿ ಧರ್ಮರಾಜನು, "ನನ್ನ ತಮ್ಮಂದಿರು ಒಂದು ಸಾಮಾನ್ಯ ಪಕ್ಷಿಯಿಂದ ಸಾಯುವವರಲ್ಲ. ನೀನು ಕೊಕ್ಕರೆಯೂ ಅಲ್ಲ. ಯಾರು ನೀನು? ನಿನಗೆ ಬೇಕಾದುದೇನು? ನಿಜವನ್ನು ಹೇಳು" ಎಂದು ಕೇಳಿದನು.

"ಹೌದು. ನಾನು ಕೊಕ್ಕರೆಯಲ್ಲ. ಯಕ್ಷರಾಜ" ಎಂದು ಹೇಳಿ ಆ ಯಕ್ಷನು ತಾಳೇ ಮರದ ಪ್ರಮಾಣದಲ್ಲಿ ಧರ್ಮರಾಜನಿಗೆ ಕಾಣಿಸಿ, "ನಿನಗೆ ನೀರು ಬೇಕಾದರೆ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಬೇಕು" ಎಂದನು.

"ಪ್ರಶ್ನೆಗಳನ್ನು ಕೇಳು. ನನಗೆ ಸಾಧ್ಯವಾದರೆ ಹೇಳುತ್ತೇನೆ" ಎಂದ ಧರ್ಮರಾಜ.

ಆಮೇಲೆ ಯಕ್ಷನು ಅನೇಕ ಪ್ರಶ್ನೆಗಳನ್ನು ಕೇಳಿದನು. ಧರ್ಮರಾಜನು ಅವನು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಸಮಾಧಾನವನ್ನು ಹೇಳಿದನು. ಅದರಿಂದ ಯಕ್ಷನಿಗೆ ಬಹಳ ತೃಪ್ತಿಯಾಯಿತು.

"ನೀನು ಹೇಳಿದ ಸಮಾಧಾನಗಳಿಗೆ ಬಹಳ ಸಂತೋಷವಾಗಿದೆ. ಆದುದರಿಂದ ಸತ್ತುಹೋದ ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಮಾತ್ರ ಬದುಕಿಸಿ ಕೊಡುತ್ತೇನೆ. ಯಾರನ್ನು ಬದುಕಿಸಲಿ? ನಿನ್ನ ಇಷ್ಟವನ್ನು ಹೇಳು" ಎಂದ ಯಕ್ಷ." ಹಾಗಿದ್ದರೆ ಬಹಳ ಸಂತೋಷ, ಯಕ್ಷರಾಜಾ, ನಕುಲನನ್ನು



ಬದುಕಿಸು" ಎಂದ ಧರ್ಮರಾಜ. ಅದನ್ನು ಕೇಳಿ ಯಕ್ಷನು ಆಶ್ಚರ್ಯ ಪಡುತ್ತ, "ಮಹಾ ಬಲಶಾಲಿಯಾದ ಭೀಮನನ್ನೂ, ಮಹಾ ಪರಾಕ್ರಮಿಯಾದ ಅರ್ಜುನನನ್ನೂ ಬಿಟ್ಟು ನಿನ್ನ ಸವತಿ ತಾಯಿಯ ಒಬ್ಬ ಮಗನನ್ನು ಕೇಳುವಿಯಲ್ಲಾ? ಏಕೆ?" ಎಂದು ಕೇಳಿದನು.

"ನಮ್ಮ ತಂದೆಗೆ ಕುಂತೀ ಮಾದ್ರಿಯರೆಂಬ ಇಬ್ಬರು ಪತ್ನಿಯರು. ಕುಂತಿಯ ಮಗಂದಿರಲ್ಲಿ ನಾನೊಬ್ಬ ಬದುಕಿಯೇ ಇದ್ದೇನೆ. ಮಾದ್ರಿಯ ಮಗಂದಿರಲ್ಲಿ ಒಬ್ಬನು ಬದುಕಿರಬೇಕಾದ್ದು ಧರ್ಮವೆಂದು ನನಗೆ ತೋರಿತು" ಎಂದ ಧರ್ಮರಾಜ.

"ಒಳ್ಳೆಯದು. ಧರ್ಮಕ್ಕೆ ದ್ರೋಹ ಮಾಡದಿರುವುದನ್ನೇ ಉತ್ತಮ ಧರ್ಮವಾಗಿ ಭಾವಿಸಿರುವೆ. ನಿನ್ನ ಎಲ್ಲಾ ತಮ್ಮಂದಿರನ್ನೂ ಬದುಕಿಸಿ ಕೊಡುತ್ತೇನೆ. ನಿನ್ನೊಂದಿಗೆ ಎಲ್ಲರಿಗೂ ಮೇಲಾಗಲಿ" ಎಂದ ಯಕ್ಷ. ಕೂಡಲೇ ಭೀಮಾರ್ಜುನ ನಕುಲ ಸಹದೇವರು

ನಿದ್ರೆಯಿಂದ ಎಚ್ಚೆತ್ತವರ ಹಾಗೆ ಎದ್ದು ಕುಳಿತರು. ಅವರಲ್ಲಿ ಹಸಿವೆ ಬಾಯಾರಿಕೆಗಳ ಕುರುಹೇ ಇರಲಿಲ್ಲ.

ಧರ್ಮರಾಜನು ಯಕ್ಷನನ್ನು ಕುರಿತು, "ಅಯ್ಯಾ, ನೀನು ಸಾಮಾನ್ಯ ಯಕ್ಷನಂತೆ ಕಾಣುವುದಿಲ್ಲ. ನೀನು ನಿಜಕ್ಕೂ ಯಾವ ದೇವನೆಂಬುದನ್ನು ಹೇಳಿ ನನ್ನನ್ನು ಧನ್ಯಗೊಳಿಸು" ಎಂದು ಕೇಳಿದನು.

ಆದಕ್ಕೆ ಯಕ್ಷನು. "ನಾನು ಧರ್ಮದೇವ. ನಿನ್ನ ತಂದೆ. ನಿನ್ನನ್ನು ಸ್ವಲ್ಪ ಪರೀಕ್ಷೆ ಮಾಡಲಿಕ್ಕಾಗಿ ಈ ರೀತಿಯಾಗಿ ಬಂದೆ" ಎಂದನು.

"ದೇವಾ. ಒಂದು ಜಿಂಕೆ ಒಬ್ಬ ಬ್ರಾಹ್ಮಣನ ಅರಣಿಯನ್ನು ಹಾರಿಸಿಕೊಂಡು ಹೋಯಿತು. ಪಾಪ. ಅದಿಲ್ಲದೆ ಅವನ ಅಗ್ನಿಕಾರ್ಯ ಸಾಗುವಂತಿಲ್ಲ. ಅವನಿಗೆ ವಿಘ್ನ ಬಾರದಂತೆ ಅನುಗ್ರಹ ಮಾಡು" ಎಂದು ಕೈಮುಗಿದ ಧರ್ಮರಾಜ.

"ನಾನೇ ಆ ಜಿಂಕೆ. ಆ ಬ್ರಾಹ್ಮಣನ ಅರಣಿಯನ್ನು ತೆಗೆದುಕೋ. ಏನಾದರೊಂದು ವರವನ್ನೂ ಕೇಳು, ಕೊಡುತ್ತೇನೆ" ಎಂದ ಧರ್ಮದೇವ.

"ನಮ್ಮ ಹನ್ನೆರಡು ವರ್ಷಗಳ ವನವಾಸವು ಪೂರ್ತಿಯಾಗುತ್ತಾ ಬರುತ್ತದೆ. ಅಜ್ಞಾತವಾಸ ಕಾಲದಲ್ಲಿ ನಮ್ಮನ್ನು ಯಾರೂ ಗುರುತಿಸಲಾಗದಂತೆ ಅನುಗ್ರಹಿಸು" ಎಂದ ಧರ್ಮದೇವ. "ಹಾಗೇ ಆಗಲಿ" ಎಂದು ಧರ್ಮದೇವ ಅದೃಶ್ಯನಾದನು.

ಪಾಂಡವರು ಅರಣಿಯನ್ನು ತೆಗೆದುಕೊಂಡು ಹೋಗಿ. ಬ್ರಾಹ್ಮಣನಿಗೆ ಕೊಟ್ಟರು. ತನ್ನ ಅಗ್ನಿಕಾರ್ಯಕ್ಕೆ ಭಂಗಬಾರದಂತೆ ಕಾಪಾಡಿದುದಕ್ಕೆ ಬ್ರಾಹ್ಮಣನು ಪಾಂಡವರಿಗೆ ತನ್ನ ಕೃತಜ್ಞತೆಯನ್ನು ಹೇಳಿಕೊಂಡು, ಅವರಿಗೆ ವಿಜಯವಾಗುವಂತೆ ಆಶೀರ್ವಾದ ಮಾಡಿ ಹೊರಟು ಹೋದನು.

ಬೇಗದಲ್ಲೇ ಪಾಂಡವರ ವನವಾಸವು ಮುಗಿಯಿತು. ಅವರು ತಮ್ಮೊಂದಿಗೆ ಇಷ್ಟು ಕಾಲದವರೆಗೂ ಇದ್ದ ಎಲ್ಲಾ ಬ್ರಾಹ್ಮಣರಿಂದಲೂ ಅಪ್ಪಣೆಯನ್ನು ಪಡೆದುಕೊಂಡು. ಅಜ್ಞಾತವಾಸವು ನಿರ್ವಿಘ್ನವಾಗಿ ನಡೆಯುವಂತೆ ಅವರೆಲ್ಲರಿಂದಲೂ ಆಶೀರ್ವಾದ ಪಡೆದರು.

ಆಗ ಧೌಮ್ಯನು ಧರ್ಮರಾಜನನ್ನು ಕುರಿತು, "ಇಂದ್ರನಿಗೇ ಅಜ್ಞಾತವಾಸವು ತಪ್ಪಲಿಲ್ಲ. ಚಿಂತಿಸಬೇಡಿ. ಬೇಗದಲ್ಲೇ ನಿಮ್ಮ ಕಷ್ಟಗಳೆಲ್ಲ ತೀರಿಹೋಗುತ್ತವೆ. ಧರ್ಮವು ನಿಮ್ಮ ಬೆಂಬಲವಾಗಿದೆ. ಸದಾ ಎಚ್ಚರಿಕೆಯಿಂದಿದ್ದರೆ ಸರಿ" ಎಂದನು.

ಪಾಂಡವರು ದ್ರೌಪದಿಯನ್ನೂ ಧೌಮ್ಯನನ್ನೂ ಕರೆದುಕೊಂಡು, ತಮ್ಮ ಆಶ್ರಮದಿಂದ ಒಂದು ಕ್ರೋಶ ದೂರದವರೆಗೆ ಹೋಗಿ. ಅಲ್ಲಿ ಏಕಾಂತವಾಗಿ ಕುಳಿತು. ಮರುದಿನದಿಂದ, ತಾವು ಪ್ರಾರಂಭಿಸಲಿರುವ ಅಜ್ಞಾತವಾಸವನ್ನು ಕುರಿತು ರಹಸ್ಯವಾಗಿ ತಮ್ಮೊಳಗೆ ಚರ್ಚಿಸಿಕೊಂಡರು.





# ಶಿವಪುರಾಣ

## ೧೪

ಶಿವನು ಎಲ್ಲಿ ಮಾಯವಾಗಿ ಹೋದನೆಂಬುದು ಪಾರ್ವತಿಗೆ ತಿಳಿಯಲಿಲ್ಲ. ರುದ್ರಗಣಗಳಿಂದ ಎಲ್ಲಾ ಲೋಕಗಳಲ್ಲಿಯೂ ತನ್ನ ಪತಿಯನ್ನು ಹುಡುಕಿಸಿದರು. ಅವರು ಬಹಳ ಸೂಕ್ಷ್ಮ ರೀತಿಯಲ್ಲಿ ಲೋಕವನ್ನೆಲ್ಲಾ ಶೋಧಿಸಿದರು. ಆಗ ಶಿವನು ಲಿಂಗರೂಪದಲ್ಲಿ ಗಜಾಸುರನ ಹೃದಯದಲ್ಲಿರುವ …ಟ ಸಂಗತಿ ತಿಳಿಯಿತು. ಏನುಮಾಡಲೂ ತೋರದೆ ಅವರು ಕೂಡಲೇ ಪಾರ್ವತಿಯ ಬಳಿಗೆ ಬಂದು ಈ ಸಂಗತಿಯನ್ನು ತಿಳಿಸಿದರು.

ಪಾರ್ವತಿ ವಿಷ್ಣುವಿನ ಬಳಿಗೆ ಹೋಗಿ, "ಅಣ್ಣಾ, ನನ್ನ ಗಂಡನನ್ನು ಗಜಾಸುರನು ಲಿಂಗ ರೂಪವನ್ನಾಗಿ ಮಾಡಿ ತನ್ನ ಹೃದಯದಲ್ಲಿ ಬಚ್ಚಿಟ್ಟಿದ್ದಾನೆ. ಯಾವ ಉಪಾಯದಿಂದಾದರೂನೂ ನನ್ನ ಪತಿಯನ್ನು ಅಲ್ಲಿಂದ ಹೊರಡಿಸಿ, ಎಂದಿನಂತೆ ಕೈಲಾಸಕ್ಕೆ ಸೇರಿಸಬೇಕು. ಇಲ್ಲದಿದ್ದರೆ ನನಗೂ ಲೋಕಕ್ಕೂ ಉಳಿಗಾಲವಿಲ್ಲ" ಎಂದು ಪ್ರಾರ್ಥಿಸಿದಳು.

ಹಾಗೆಯೇ ಮಾಡುತ್ತೇನೆಂದು ವಿಷ್ಣು ಅವಳಿಗೆ ಮಾತು ಕೊಟ್ಟನು. ಶಿವನು ಕೈಲಾಸಕ್ಕೆ ತಿರುಗಿ ಬರುವವರೆಗೂ, ಗಣಪತಿಗಳಲ್ಲಿ ಹಿರಿಯನಾದವನನ್ನು ಕೈಲಾಸವನ್ನೂ ಪಾರ್ವತಿಯನ್ನೂ ಸಂರಕ್ಷಿಸಲು ಏರ್ಪಾಡು ಮಾಡಿ ವಿಷ್ಣು, ರುದ್ರ, ವೀರಭದ್ರ ಗಣಗಳೊಂದಿಗೆ ಬ್ರಹ್ಮನ ಬಳಿಗೆ ಹೋದನು. ದೇವೇಂದ್ರನು ಇತರ ದೇವತೆಗಳೊಂದಿಗೆ ಬಂದು, ಶಿವನ ವಿಮೋಚನೆಗಾಗಿ ವಿಷ್ಣು ತಲೆಹಾಕಿದ ಕಾರ್ಯವನ್ನು ತಿಳಿದುಕೊಂಡನು.

ತರುವಾಯ ಎಲ್ಲರೂ ವೇಷಬದಲಾವಣೆ ಮಾಡಿ, ರುದ್ರಗಣಗಳೊಂದಿಗೆ ಶೋಣಿತಪುರಕ್ಕೆ ಹೋದರು. ನಂದಿ ಗಂಗೆತ್ತಾಗಿ ಬದಲಾಯಿಸಿದನು. ಉಳಿದವರೆಲ್ಲ ವಿಧವಿಧವಾದ ವಾದ್ಯಗಾರರ ಹಾಗೆ ವೇಷ ಧರಿಸಿದ್ದರು. ವಿಷ್ಣು ಗಂಗೆತ್ತನ್ನು ಆಡಿಸುವವನಂತೆ ಕಾಣಿಸುತ್ತಿದ್ದನು. ಹೀಗೆ ಇವರೆಲ್ಲಾ ಶೋಣಿತಪುರಕ್ಕೆ ಬಂದು ಸೇರಿ, ಬೀದಿಗಳಲ್ಲಿ ತಿರುಗುತ್ತ, ಗಂಗೆತ್ತನ್ನು ಆಡಿಸುತ್ತ, ಶಿವಸ್ತೋತ್ರಗಳನ್ನು ಹಾಡುತ್ತ ಸಾಗುತ್ತಿದ್ದರು. ಊರವರು ಕುತೂಹಲದಿಂದ ಅವರ ಆಟಪಾಟಗಳನ್ನು ನೋಡುತ್ತಿದ್ದರು. ಊರಿಗೆ ಅದ್ಭುತವಾದ ಗಂಗೆತ್ತು ಬಂದಿದೆಯೆಂದೂ, ಅದು

ಹಿಂಬದಿಯ ಚಿತ್ರ ಕಥೆ



ಮನುಷ್ಯರು ಹೇಳಿದ ಹಾಗೆ ಕೇಳುತ್ತದೆಂದೂ ಕೇಳಿ ಗಜಾಸುರನು, ಆ ಗಂಗೆತ್ತಿನ ಗುಂಪಿನವರನ್ನು ತನ್ನ ಸಭೆಗೆ ಕರೆಯಿಸಿಕೊಂಡನು. ಅಲ್ಲಿ ಗಂಗೆತ್ತು ಹಾಡಿಗೆ ತಕ್ಕ ಹಾಗೆ ನೃತ್ಯಮಾಡಿತು. ಹಾಡುಗಳೆಲ್ಲವೂ ಶಿವನ ಸ್ತುತಿಗಳೇ. ಆ ಸ್ತೋತ್ರದ ಹಾಡುಗಳಿಗೆ ಗಜಾಸುರನ ಹೊಟ್ಟೆಯಲ್ಲಿರುವ ಶಿವಲಿಂಗವು ಮೆಚ್ಚಿಕೆಯಿಂದ ಉಬ್ಬುತ್ತಾ ಬರತೊಡಗಿತು.

ಲಿಂಗವು ವಿಸ್ತಾರವಾಗುತ್ತಿರಲು ಗಜಾಸುರನಿಗೆ ಉಸಿರಾಡಲು ಕಷ್ಟವಾಯಿತು. ತೀರಾ ಉಸಿರು ನಿಂತುಹೋಗುವುದನ್ನು ಗಮನಿಸಿ ಅವನು "ಪರಮೇಶ್ವರಾ ! ನನ್ನನ್ನು ರಕ್ಷಿಸು !" ಎಂದು ಕೂಗಿದನು.

"ಗಜಾ, ನಿನಗೆ ಸಾವು ತಪ್ಪುವುದಿಲ್ಲ. ಬದುಕುವ ಉಪಾಯವಾವುದೂ ಇನ್ನಿಲ್ಲ. ನಿನಗಿಷ್ಟವಾದ ವರ ಕೇಳು" ಎಂದ ಲಿಂಗರೂಪೀ ಶಿವ.

"ನನ್ನ ತಲೆ ಪೂಜನೀಯವಾಗಿರಬೇಕು. ನನಗೆ ಜನ್ಮವಿಲ್ಲದಂತಾಗಬೇಕು" ಎಂದು ಕೊನೆಗಾಲದ ವರ ಕೇಳಿದ ಗಜಾಸುರ. ಮತ್ತೆ ಅವನಿಂದ ಶಬ್ದ ಹೊ… ಲಿಲ್ಲ. ಶಿವನು ಅವನು ಕೋರಿದ ವರಗಳನ್ನು ಕೊ… ಅವನು ಇಲಿಯ ರೂಪದಲ್ಲಿ ತನ್ನ ಬಳಿಯಲ್ಲಿರು… ಅನುಗ್ರಹ ಮಾಡಿದನು. ಬಳಿಕ ಶಿವನು ಗಜಾಸು… ಹೊಟ್ಟೆಯನ್ನು ಸೀಳಿ ಹೊರಗೆ ಬಂದನು.

ಇದನ್ನೆಲ್ಲಾ ನೋಡಿ ಗಜಾಸುರನ ಪರಿವಾರದ… ಕೋಪದಿಂದ "ಮೋಸ ! ವಂಚನೆ ! ದ್ರೋಹ… ಎಂದು ಕೂಗುತ್ತಾ ಯುದ್ಧಕ್ಕೆ ಬಂದರು. ವಿ… ಆ ರಾಕ್ಷಸರನ್ನೆಲ್ಲಾ ಕೊಂದು ಹಾಕಿದನು.

ತರುವಾಯ ಬ್ರಹ್ಮ ವಿಷ್ಣು ದೇವೇಂದ್ರ… ನಂದೀಶ್ವರ ಮೊದಲಾದವರೂ ತಮ್ಮ ತಮ್ಮ… ರೂಪವನ್ನು ತಳೆದುಕೊಂಡು ಶಿವನಿಗೆ ನಮಸ್ಕ… ಮಾಡಿದರು. ಅನಂತರ ಅವರೆಲ್ಲ ರುದ್ರಗಣಗಳ… ಕರೆದುಕೊಂಡು ಕೈಲಾಸಕ್ಕೆ ನಡೆದರು. ತಾನು ಗಜಾ… ಸುರನನ್ನು ಕೊಂದು ತಿರುಗಿ ಬರುತ್ತಿದ್ದೇನೆಂದು ಶಿವ… ಪಾರ್ವತಿಗೆ ಸಮಾಚಾರ ಕಳುಹಿಸಿದನು.

ಈ ಮೊದಲೇ ಆ ಸುದ್ದಿ ತಿಳಿದು ಸಂತೋಷದ… ರುವ ಪಾರ್ವತಿ, ನೀರೆರೆದುಕೊಂಡು ಗೃಹದೇ… ಗಳನ್ನು ಪೂಜಿಸುವ ಉದ್ದೇಶದಿಂದ, ಸಿಂಹದ್ವಾರದ… ರುವ ಲಕ್ಷ್ಮೀ ಗಣಾಧಿಪತಿಗಳೊಂದಿಗೆ, "ಅಪ್ಪ… ನಾನು ನೀರೆರೆದುಕೊಳ್ಳುತ್ತೇನೆ. ಒಳಗೆ ಯಾರ… ಬರಲು ಬಿಡಬೇಡಿರಿ. ನಾನು ಹೇಳುವವರೆ… ಯಾರೂ ಒಳಗೆ ಬಾರದಿರಲಿ" ಎಂದು ಹೇಳಿ ಸ್ನಾ… ಮನೆಯೊಳಗೆ ಹೋದಳು.

ಸ್ವಲ್ಪ ಹೊತ್ತಿಗೆಲ್ಲಾ ನಂದೀಶ್ವರ ಮೊದಲಾದ… ವರು ಬಂದು, ಒಳಗೆ ಪ್ರವೇಶಿಸಲು ನೋಡಿದ… ಆಗ ಲಕ್ಷ್ಮೀ ಗಣಾಧಿಪತಿಗಳು ಅವರಿಗೆ ಅಡ್ಡ… "ಅಮ್ಮ ಎರೆದುಕೊಳ್ಳುತ್ತಿದ್ದಾಳೆ. ಯಾರನ್ನೂ ಒ… ಬಿಡಕೂಡದೆಂದಿದ್ದಾಳೆ. ಆದುದರಿಂದ ಅಮ್ಮ ಹೇ… ವರೆಗೂ ನೀವಾರೂ ಒಳಗೆ ಹೋಗಕೂಡದು. ನಾನು ಬಿಡಲಾರೆ" ಎಂದರು.

"ನಾವು ಈಶ್ವರಾಜ್ಞೆಯಿಂದ ಬಂದವರು. ಈಶ್ವರಾಜ್ಞೆಗೆ ಮೂರು ಲೋಕಗಳಲ್ಲಿಯೂ ಇದಿರಿಲ್ಲವೆಂಬುದು ಗೊತ್ತಿದೆಯಷ್ಟೆ? ಮಧ್ಯೆ ತಡೆಯಲು ನೀವಾರು?" ಎನ್ನುತ್ತ ರುದ್ರಗಣಗಳು, ಲಕ್ಷ್ಮೀಗಣಗಳೊಂದಿಗೆ ಯುದ್ಧಕ್ಕೆ ತೊಡಗಿದರು. ದೊಡ್ಡ ಕೋಲಾಹಲ ನಡೆಯಿತು.

ಈ ಕೋಲಾಹಲದ ಧ್ವನಿಯನ್ನು ಪಾರ್ವತಿಯ ಪರಿಚಾರಿಕೆಯೊಬ್ಬಳು ಕೇಳಿ, ಹೊರಗೆ ಬಂದು ನೋಡಿ ಪಾರ್ವತಿಯ ಬಳಿಗೆ ಓಡಿ, "ಅಮ್ಮಮ್ಮಾ. ಲಕ್ಷ್ಮೀಗಣಗಳೂ ರುದ್ರಗಣಗಳೂ ಹೊಡೆದಾಡಿಕೊಳ್ಳುತ್ತಿದ್ದಾರೆ" ಎಂದಳು.

ಪಾರ್ವತಿ ರುದ್ರಗಣಗಳ ಮೇಲೆ ಕೋಪಗೊಂಡು, ಲಕ್ಷ್ಮೀಗಣಗಳಿಗೆ ಸಹಾಯವಾಗಿ ದೇವಗಣಗಳನ್ನು ಕಳುಹಿಸಿದಳು. ಲಕ್ಷ್ಮೀಗಣಗಳೂ ದೇವಗಣಗಳೂ ಒಂದಾಗಿ ರುದ್ರಗಣಗಳನ್ನು ಚೆನ್ನಾಗಿ ಹೊಡೆದು ಓಡಿಸಿಬಿಟ್ಟರು. ಅವರು ಓಡಿಹೋಗಿ ನಡೆದ ಸಂಗತಿಯನ್ನು ಶಿವನೊಂದಿಗೆ ಹೇಳಿದರು.

ಆಗ ಅಲ್ಲಿದ್ದ ನಾರದನು, "ಪಾರ್ವತಿಯ ದ್ವಾರಪಾಲಕರಿಗೆ ಇಷ್ಟೊಂದು ಪೊಗರೆ? ಶಿವನ ಆಜ್ಞೆಯನ್ನೇ ಧಿಕ್ಕರಿಸುವರೇನು?" ಎಂದನು.

ತನ್ನ ಭೃತ್ಯರು ಪೆಟ್ಟು ತಿಂದು ಬಂದುದರಿಂದ ಸಿಟ್ಟುಗೊಂಡಿದ್ದ ಶಿವನು ನಾರದನ ಮಾತಿನಿಂದ ಇನ್ನಷ್ಟು ಕೆರಳಿದನು. ಅವನು ತನ್ನ ತ್ರಿಶೂಲವನ್ನು ಕಳುಹಿಸಿ, ಲಕ್ಷ್ಮೀಗಣಗಳ ತಲೆಗಳನ್ನು ಕಡಿಸಿಬಿಟ್ಟನು. ತನ್ನ ಮುದ್ದು ಕುಮಾರರ ತಲೆಗಳು ಹಾರಿಹೋದುದನ್ನು ನೋಡಿ ಪಾರ್ವತಿ ದುಃಖದಲ್ಲಿ ಮುಳುಗಿದಳು.

ಪಾರ್ವತೀ ದೇವಿಯ ಮನೆಯೊಳಗೆ ಹೋಗಲು ಅಡ್ಡ ತಡೆಯುವವರು ಈಗ ಯಾರೂ ಬಾಗಿಲಲ್ಲಿರಲಿಲ್ಲ. ಆದುದರಿಂದ ಶಿವನು ಬ್ರಹ್ಮ ವಿಷ್ಣುಗಳ ಜತೆಯಲ್ಲಿ ಪಾರ್ವತಿಯ ಮನೆಯೊಳಗೆ ಬಂದನು. ಆಗಲೇ ತಲೆಗೆ ನೀರೆರೆದು, ಶೃಂಗಾರ ಮಾಡಿಕೊಂಡು, ಗೃಹದೇವತೆಗಳನ್ನು ಪೂಜಿಸಿ ಮುಗಿಸಿದ್ದ ಪಾರ್ವತಿ ಲಕ್ಷ್ಮೀಗಣಗಳ ಮರಣವನ್ನು ತಿಳಿದು ದುಃಖದಲ್ಲಿದ್ದುದರಿಂದ, ಬಂದವರನ್ನು ಗೌರವಿಸಲಾರದೆ ಹೋದಳು.



ಯಾರನ್ನೂ ನೋಡದೆ, ದುಃಖದಿಂದಲೂ ಕೋಪದಿಂದಲೂ ಮುದುಡಿ ಕುಳಿತಿದ್ದಳು.

ಅವಳ ದುಃಖವನ್ನು ಶಮನ ಮಾಡಲಿಕ್ಕಾಗಿ ಶಿವನು ಪಾರ್ವತಿಯ ಬಳಿಗೆ ಹೋದನು. ಅವಳು ಶಿವನನ್ನು ಕಣ್ಣೆತ್ತಿಯೂ ನೋಡಲಿಲ್ಲ.

ಆಗ ವಿಷ್ಣು ಪಾರ್ವತಿಯ ಬಳಿಗೆ ಹೋಗಿ, "ತಂಗೀ, ಗಜಾಸುರನು ಸತ್ತುದಕ್ಕೆ ಮೂರು ಲೋಕಗಳೂ ಆನಂದದಲ್ಲಿರುವಾಗ ನೀನು ದುಃಖದಲ್ಲಿರಲು ಕಾರಣವೇನು ? ನಿನಗೆ ಬಂದ ಕಷ್ಟವೇನೆಂಬುದನ್ನು ಹೇಳು, ನಾನು ತೀರಿಸುತ್ತೇನೆ" ಎಂದನು.

ಪಾರ್ವತಿ ವಿಷ್ಣುವನ್ನು ನೋಡಿ, "ಅಣ್ಣಾ, ಶಿವನು ನಿಷ್ಕಾರಣವಾಗಿ ನನ್ನ ಕುಮಾರರಾದ ಲಕ್ಷ್ಮೀಗಣಗಳ ತಲೆಗಳನ್ನು ಕಡಿದುಹಾಕಿದ. ಅವರನ್ನು ಬದುಕಿಸಿ, ಅವರಿಗೆ ತಕ್ಕ ಅಧಿಕಾರ ಕೊಟ್ಟ ಹೊರತು ನನ್ನ ದುಃಖ ಶಮನವಾಗದು" ಎಂದಳು.

ಇದನ್ನು ತಿಳಿದು ತ್ರಿಮೂರ್ತಿಗಳೂ ಸೇರಿ ಕುಳಿತು ಆಲೋಚಿಸಲು ತೊಡಗಿದರು. ಶಿವನು ಗಜಾಸುರನಿಗೆ ತಾನು ಕೊಟ್ಟಿರುವ ವರಗಳನ್ನು ಕುರಿತು ಹೇಳಿದನು. ತನ್ನ ತಲೆ ಪೂಜನೀಯವಾಗಿರಬೇಕೆಂದೂ, ತನ್ನ ಚರ್ಮವನ್ನು ಶಿವನು ಧರಿಸಬೇಕೆಂದೂ ಗಜಾಸುರನು ಸಾಯುವ ಮೊದಲು ವರ ಕೇಳಿಕೊಂಡಿದ್ದನು. ಆದುದರಿಂದ ಲಕ್ಷ್ಮೀಗಣಗಳಿಗೆ ಅಧಿಪತಿಯಾದವನ ಶರೀರವನ್ನು ಸಭೆಗೆ ತರಿಸಿದರು. ರುದ್ರಗಣಗಳ ಮೂಲಕವಾಗಿ ಗಜಾಸುರನ ತಲೆಯನ್ನೂ ತರಿಸಿದರು. ಆ ತಲೆಯನ್ನು ಲಕ್ಷ್ಮೀಗಣಾಧಿಪತಿಯ ಶರೀರಕ್ಕೆ ಅಂಟಿಸಿದರು. ಕೂಡಲೇ ಲಕ್ಷ್ಮೀ ಗಣಾಧಿಪತಿ ನಿದ್ದೆಯಿಂದೆದ್ದವನ ಚಂದದಲ್ಲಿ ಎದ್ದು ನಿಂತು, ಪಾರ್ವತಿಗೂ ವಿಷ್ಣುವಿಗೂ ನಮಸ್ಕಾರ ಮಾಡಿದನು. ಅದೇ ವಿಧವಾಗಿ ಉಳಿದ ಇಪ್ಪತ್ತು ಮಂದಿ ಗಣಾಧಿಪತಿಗಳ ಮುಂಡಗಳಿಗೂ ಆನೆಯ ತಲೆಗಳನ್ನು ತಂದು ಅಂಟಿಸಿದರು. ಕೂಡಲೇ ಅವರೆಲ್ಲರೂ ಬದುಕಿ ಎದ್ದುದನ್ನು ನೋಡುತ್ತಲೇ ಪಾರ್ವತಿ ಸಂತೋಷಭರಿತಳಾದಳು.

ಇಂತಹ ಆನಂದದ ವೇಳೆಯಲ್ಲಿ ವಿಶ್ವದರ್ಶಿ ಎಂಬ ಉಪಬ್ರಹ್ಮನು ಸಭೆಯಲ್ಲಿ ಎದ್ದುನಿಂತು, "ಶಿವ ಪಾರ್ವತಿಯರೆ, ಈ ಶುಭ ಸಂದರ್ಭದಲ್ಲಿ ನನ್ನ ಕುಮಾರಿಯರಾದ ಜಯಲಕ್ಷ್ಮಿ ಮೊದಲಾದವರನ್ನು ಲಕ್ಷ್ಮೀ ಗಣಾಧಿಪತಿಗಳಿಗೆ ಕೊಟ್ಟು ಮದುವೆ ಮಾಡೋಣ. ಏನನ್ನುವಿರಿ ?" ಎಂದನು.

ಈ ಮಾತಿಗೆ ಎಲ್ಲರೂ ಸಂತೋಷದಿಂದ ಒಪ್ಪಿದರು. ಬ್ರಹ್ಮನು ತಾನೇ ಪುರೋಹಿತನಾಗಿದ್ದು, ವಿಶ್ವದರ್ಶಿಯ ಪುತ್ರಿಯರನ್ನು ಗಣಾಧಿಪತಿಗಳಿಗೆ ಕೊಟ್ಟು ಮದುವೆ ಮಾಡಿಸಿದನು. ಈ ಗಣಾಧಿಪತಿಗಳಲ್ಲಿ ಲಕ್ಷ್ಮೀಗಣಪತಿ ದೊಡ್ಡವನು, ಅವನ ಹೆಂಡತಿಯ ಹೆಸರು ಜಯಲಕ್ಷ್ಮಿ.



# ೧೩೪. ಸಿನಾಯ್ ಪರ್ವತ

ಈ ಬೆಟ್ಟದಲ್ಲೇ ಮೋಜೆಸ್ "ಹತ್ತು ಕಟ್ಟಳೆ"ಗಳನ್ನು (ಟೆನ್ ಕಮಾಂಡ್‌ಮೆಂಟ್ಸ್) ಸ್ವೀಕರಿಸಿದನು. ಇಲ್ಲಿಯೇ ಆದಿ ಕ್ರೈಸ್ತರು ತಲೆ ಮರೆಸಿಕೊಂಡಿದ್ದರು. ಇದು ಸಿನಾಯ್ ಮರುಭೂಮಿಯ ನಡುವಿನಲ್ಲಿದೆ.



Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

**ಹಸುಳೆಗಳ ಹಾಲ್ಮುದ್ದಿನ ಆ ಸವಿ**

ಕಳುಹಿಸಿದವರು :
ಕೆ. ಎನ್. ರಾಜನ್

Photo by Brahm Dev



ಕಾರ್ತಿಕೇಯ ಭವನ, ಆರ್ಕಾಟ್
ರೋಡ್, ಮದ್ರಾಸು-೨೬.

ಹೊಸ ನಸೆಕನ್ನಡಿಗೆ ಇದ್ದೀತೆ?

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಏಪ್ರಿಲ್ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಗೆದ್ದ ಶೀರ್ಷಿಕೆಗಳು ಜೂನ್ '೭೦ರ ಸಂಚಿಕೆಯಲ್ಲಿ ಪ್ರಕಟವಾಗುತ್ತದೆ.

# ಚಂದಮಾಮ

### ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:

**ಮದುಮಗಳು**

ಮೂರನೇ ಹೊದಿಕೆಯ ಚಿತ್ರ:

**ಮುತ್ತೈದೆಯರು**


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-26. Controlling Editor: 'CHAKRAPANI'

# ಟ್ಯಾಬಿ
## ವಿಮಾನ ಕಳ್ಳರ ನಡುವೆ



















